KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೨೫, ೨೦೧೦ (ಚೈತ್ರ ೪, ಶಕ ವರ್ಷ ೧೯೩೨) | ಸಂಚಿಕೆ ೧೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಾಣಿಕಪ್ಪ, ಮಂಗಲಗಿ, ತಹಶೀಲ್ದಾರ್ ಗುಲ್ಬರ್ಗಾ ಇವರಿಗೆ ವೈದ್ಯಕೀಯ ವೆಚ್ಚದ ಮರು ಪಾವತಿ ಬಗ್ಗೆ.

**ಉಲ್ಲೇಖ :** 1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಕಂ/ಸಿಬ್ಬಂದಿ–2/47/2009–10, ದಿನಾಂಕ : 09–07–2009.

2. ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಎಂಡಿಎ: ಗುಲ್ಬರ್ಗಾ. ವಿ(3)218/09–10, ದಿನಾಂಕ: 16–09–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿ ಗುಲ್ಬರ್ಗಾ ಇವರು ಶ್ರೀ ಮಾಣಿಕಪ್ಪ ಮಂಗಲಗಿ, ತಹಶೀಲ್ದಾರ್ ಗುಲ್ಬರ್ಗಾ ಇವರು ತಮ್ಮ 'Acute Cholecystitis Liparoscopic Cholecystectomy' ಎಂಬ ಖಾಯಿಲೆಗಾಗಿ ಚಿಕಿತ್ಸೆಯನ್ನು ಹೊರ ರಾಜ್ಯವಾದ ಆಂಧ್ರಪ್ರದೇಶದ ಹೈದರಾಬಾದಿನ ಮೆಡಿಸಿಟಿ ಹಾಸ್ಪಿಟಲ್ಸ್ ಇಲ್ಲಿ ಪಡೆಯಲಾಗಿದ್ದು, ಇದಕ್ಕಾಗಿ ಒಟ್ಟು ರೂ. 1,99,701/– ಗಳ ವೈದ್ಯಕೀಯ ವೆಚ್ಚ ಸಂದಾಯ ಮಾಡಿರುವುದಾಗಿ ಅರ್ಜಿದಾರರು ತಿಳಿಸಿದ್ದು ಸದರಿ ವೈದ್ಯಕೀಯ ವೆಚ್ಚದ ಬಗ್ಗೆ ಜಿಲ್ಲಾ ಶಸ್ತ್ರಜ್ಞರು ಸರ್ಕಾರಿ ಸಾರ್ವಜನಿಕ ಆಸ್ಪತ್ರೆ ಬೀದರ್ ಇವರು ಪರಿಶೀಲಿಸಿದ್ದು, ಅದರಂತೆ ಒಟ್ಟು ಮೊತ್ತದ ಬಿಲ್ ಪೈಕಿ ರೂ. 1,78,025/– ಮಾತ್ರ ಮರುಪಾವತಿಗೆ ಯೋಗ್ಯವಿದೆಯೆಂದು ವರದಿ ಮಾಡಿದ್ದಾರೆ ಎಂದು ತಿಳಿಸುತ್ತಾ, ಸದರಿ ವೆಚ್ಚವನ್ನು ಮರುಪಾವತಿಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಸದರಿ ವೆಚ್ಚಕ್ಕೆ ಸಂಬಂಧಿದಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಬೆಂಗಳೂರು ಇವರು ರೂ. 84,249/– ಗಳನ್ನು ಮಾತ್ರ ಪಾವತಿಸಬಹುದೆಂದು ಅಭಿಪ್ರಾಯಪಟ್ಟಿದ್ದು, ಅದರಂತೆ ರೂ. 84,249/– ಗಳನ್ನು ಮರು ಪಾವತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 452 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಮಾಣಿಕಪ್ಪ ಮಂಗಲಗಿ, ತಹಶೀಲ್ದಾರ್, ಗುಲ್ಬರ್ಗಾ ಇವರು ತಮ್ಮ ಚಿಕಿತ್ಸೆಗೆ ವೆಚ್ಚ ಮಾಡಿದ ರೂ. 84,249/– (ಎಂಬತ್ತು ನಾಲ್ಕು ಸಾವಿರದ ಎರಡು ನೂರ ನಲವತ್ತೊಂಬತ್ತು ರೂಪಾಯಿಗಳು ಮಾತ್ರ) ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 31ರಲ್ಲಿ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಮರುಪಾವತಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಸೇವಾ ನಿಯಮ) ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 583 ಸೇನಿಎಫ್ 2009, ದಿನಾಂಕ: 04–11–2009 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಅಇ 1162–ಸೇ–1/09, ದಿನಾಂಕ: 31–12–2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 412

**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಹರಿಣಿ ವನಜಕುಮಾರಿ ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ ಬೆಂಗಳೂರು, ಇವರಿಗೆ 1ನೇ ಹಾಗೂ 2ನೇ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ: 102:ಎಎಸ್‌ಡಿ:2007 ದಿನಾಂಕ: 24–12–2007.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ: 308:ಎಎಸ್‌ಡಿ:2007 ದಿನಾಂಕ: 24–12–2007.
3. ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಇ/1/ಅರ್–1/ಪಿಎಫ್–204/ಹೆಚ್–111–54/633 ದಿನಾಂಕ: 02–09–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯ ಕ್ರಮಸಂಖ್ಯೆ 35ರಲ್ಲಿ ಶ್ರೀಮತಿ ಹರಿಣಿ ವನಜಕುಮಾರಿ ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ ಬೆಂಗಳೂರು, ಇವರಿಗೆ ದಿನಾಂಕ: 27–01–2001 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–2 ವೃಂದದಲ್ಲಿ ಬಡ್ತಿ ಸಕ್ರಮಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ಅಧಿಸೂಚನೆಯ ಕ್ರಮಸಂಖ್ಯೆ 13ರಲ್ಲಿ ಶ್ರೀಮತಿ ಹರಿಣಿ ವನಜಕುಮಾರಿ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿ ಆದೇಶಿಸಿದೆ. ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಮಹಾಲೇಖಪಾಲರು ಕರ್ನಾಟಕ ಬೆಂಗಳೂರು ಇವರ ದಿನಾಂಕ: 02–09–2009ರ ಪತ್ರದಲ್ಲಿ ಶ್ರೀಮತಿ ಹರಿಣಿ ವನಜಕುಮಾರಿ ತಹಶೀಲ್ದಾರ್ ಇವರಿಗೆ ದಿನಾಂಕ: 27–01–2001 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–2 ವೃಂದದಲ್ಲಿ ಬಡ್ತಿ ಸಕ್ರಮಗೊಳಿಸಿ ಆದೇಶಿಸಿರುವುದರಿಂದ ಇವರಿಗೆ ವೇತನ ಶ್ರೇಣಿ 11400–21600ರಲ್ಲಿ ದಿನಾಂಕ: 01–10–2005ರಂದು ಗರಿಷ್ಠ ಮಿತಿ ತಲುಪಿರುತ್ತಾರೆ. ಆದುದರಿಂದ ಸದರಿಯವರಿಗೆ ವೇತನ ಶ್ರೇಣಿ ರೂ. 11400–21600ರಲ್ಲಿ 1ನೇ ಸ್ಥಗಿತ ವೇತನ ಬಡ್ತಿಯನ್ನು ದಿನಾಂಕ: 01–10–2006 ರಿಂದ ಮತ್ತು ದಿನಾಂಕ: 01–10–2007 ರಿಂದ 2ನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಬೇಕಾಗಿರುತ್ತದೆ. ಎಂದು ತಿಳಿಸುತ್ತಾ, ಈ ಬಗ್ಗೆ ಆದೇಶ ಹೊರಡಿಸಲು ಕೋರಿರುತ್ತಾರೆ.

ಸರ್ಕಾರ ಮಹಾಲೇಖಪಾರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಶ್ರೀಮತಿ ಹರಿಣಿ ವನಜಕುಮಾರಿ, ಇವರಿಗೆ ವೇತನ ಶ್ರೇಣಿ ರೂ. 11400–21600ರಲ್ಲಿ 1ನೇ ಸ್ಥಗಿತ ವೇತನ ಬಡ್ತಿಯನ್ನು ಹಾಗೂ ದಿನಾಂಕ: 01–10–2006 ರಿಂದ ಹಾಗೂ ದಿನಾಂಕ: 01–10–2007ರಿಂದ 2ನೇ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದರಿಂದ, ಸದರಿ ವೇತನ ಬಡ್ತಿಗಳನ್ನು ಮಂಜೂರು ಮಾಡಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 690: ಎಎಸ್‌ಡಿ 2009, ಬೆಂಗಳೂರು, ದಿನಾಂಕ: 29ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಹರಿಣಿ ವನಜಕುಮಾರಿ, ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಎರಡು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಲಾಗಿದೆ.

1) ವೇತನ ಶ್ರೇಣಿ ರೂ. 11400–21600ರಲ್ಲಿ ದಿನಾಂಕ: 01–10–2006ರಿಂದ ಜಾರಿಗೆ ಬರುವಂತೆ 1ನೇ ಸ್ಥಗಿತ ವೇತನ ಬಡ್ತಿ.

2) ವೇತನ ಶ್ರೇಣಿ ರೂ. 11400–21600ರಲ್ಲಿ ದಿನಾಂಕ: 01–10–2007ರಿಂದ ಜಾರಿಗೆ ಬರುವಂತೆ 2ನೇ ಸ್ಥಗಿತ ವೇತನ ಬಡ್ತಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 413

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎನ್. ತಿಪ್ಪೇಸ್ವಾಮಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 241 ಎಎಸ್‌ಡಿ 2005, ದಿನಾಂಕ: 25–01–2006.

2. ಶ್ರೀ ಎನ್. ತಿಪ್ಪೇಸ್ವಾಮಿ, ತಹಶೀಲ್ದಾರ್ ಇವರ ಮನವಿ ದಿನಾಂಕ: 28–08–2008.

3. ಸರ್ಕಾರಿ ಆದೇಶ ಸಂಖ್ಯೆ: ಕಂಇ 96 ಕಸನಿ 99, ದಿನಾಂಕ: 16–03–2002.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 25–01–2006ರ ಅಧಿಸೂಚನೆಯಲ್ಲಿ ಶ್ರೀ ಎನ್. ತಿಪ್ಪೇಸ್ವಾಮಿ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ ಸೇರುವ ಪೂರ್ವದಲ್ಲಿ ಕುವೆಂಪು ವಿಶ್ವ ವಿದ್ಯಾನಿಲಯದಲ್ಲಿ ದಿನಾಂಕ: 12–08–1994 ರಿಂದ ದಿನಾಂಕ: 24–07–1997 ರವರೆಗೆ ಪ್ರಥಮ ದರ್ಜೆ ಸಹಾಯಕರಾಗಿ ಹಾಗೂ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ದಿನಾಂಕ: 24–07–1997 ರಿಂದ ದಿನಾಂಕ: 01–02–2006 ರವರೆಗೆ ಸಲ್ಲಿಸಿದ ಸೇವಾ ಅವಧಿಯನ್ನು ಪ್ರಸ್ತುತ ತಹಶೀಲ್ದಾರ್ ಹುದ್ದೆಗೆ ಪರಿಗಣಿಸುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 28–08–2008ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುತ್ತಾರೆ.

ಶ್ರೀ ಎನ್. ತಿಪ್ಪೇಸ್ವಾಮಿ, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 16–03–2002ರ ಆದೇಶದಲ್ಲಿ ಈಗಾಗಲೇ ಶ್ರೀ ಎನ್. ತಿಪ್ಪೇಸ್ವಾಮಿ ಇವರು ದಿನಾಂಕ: 12–08–1994 ರಿಂದ ದಿನಾಂಕ: 23–07–1997 ರವರೆಗೆ ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ ಇಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ್ದ ಅವಧಿಯನ್ನು ಕರ್ನಾಟಕ ಸೇವಾ ನಿಯಮಗಳನ್ವಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿರುವುದರಿಂದ ಇದನ್ನು ಹೊರತುಪಡಿಸಿ ಶ್ರೀಯುತರು ಕನ್ನಡ ಮತ್ತು ಸಂಸ್ಕೃತ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಸಲ್ಲಿಸಿದ್ದ ಸೇವಾ ವಿವರಗಳನ್ನು ಮಹಾಲೇಖಪಾಲರಿಂದ ಪಡೆದು ಅವರ ವರದಿಯಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ದಿನಾಂಕ: 24–07–1997 ರಿಂದ ದಿನಾಂಕ: 01–02–2006 ರವರೆಗೆ ಸಲ್ಲಿಸಿದ್ದ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 05 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 27ನೇ ಜನವರಿ 2010**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಎನ್. ತಿಪ್ಪೇಸ್ವಾಮಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು ಇವರು ಕಂದಾಯ ಇಲಾಖೆಯ ಸೇವೆಗೆ ಸೇರಿರುವ ಪೂರ್ವದಲ್ಲಿ ಕನ್ನಡ ಮತ್ತು ಸಂಸ್ಕೃತ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ದಿನಾಂಕ: 24–07–1997 ರಿಂದ

01–02–2006 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ಇವರ ಟಿಪ್ಪಣಿ ಸಂಖ್ಯೆ: ಆ.ಇ. 1817 ವೆಚ್ಚ–7/2009, ದಿನಾಂಕ: 28–10–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 414

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಶಿವಸಾಗರ್ ಶುಗರ್ಸ್ ಅಂಡ್ ಆಗ್ರೋ ಪ್ರಾಡಕ್ಟ್ ಲಿ., ರವರು ಬೆಳಗಾಂ ಜಿಲ್ಲೆ ರಾಮದುರ್ಗ್ ತಾಲ್ಲೂಕು, ಉದುಪುಡಿ ಗ್ರಾಮದಲ್ಲಿ ಸ್ಥಾಪಿಸಲಿರುವ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 287 ಎಸ್‌ಜಿಎಫ್ 07 ದಿನಾಂಕ 11–09–2007

2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್ ಕೆ/ಡಿಇವಿ/50/2007–08 ದಿನಾಂಕ 19–01–2009

**ಪ್ರಸ್ತಾವನೆ :**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ಶಿವಸಾಗರ್ ಶುಗರ್ಸ್ ಅಂಡ್ ಆಗ್ರೋ ಪ್ರಾಡಕ್ಟ್ ಲಿ., ರವರು ಬೆಳಗಾಂ ಜಿಲ್ಲೆ, ರಾಮದುರ್ಗ್ ತಾಲ್ಲೂಕು, ಉದುಪುಡಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1) ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 262 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2010**

ಶ್ರೀ ಶಿವಸಾಗರ್ ಶುಗರ್ಸ್ ಅಂಡ್ ಆಗ್ರೋ ಪ್ರಾಡಕ್ಟ್ ಲಿ., ರವರು ಬೆಳಗಾಂ ಜಿಲ್ಲೆ ರಾಮದುರ್ಗ್ ತಾಲ್ಲೂಕು, ಉದುಪುಡಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ. ಕಾರ್ಖಾನೆಗೆ ಕಬ್ಬಿನ ಮೀಸಲು ಕ್ಷೇತ್ರಗಳಿಗೆ ಸಂಬಂಧಿಸಿದಂತೆ, ಅಧಿಸೂಚನೆಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಅನುಮತಿಯನ್ನು ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಆನಂದ್ ಕುಮಾರ್)**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 415

## COMMERCE & INDUSTRIES SECRETARIAT

**Subject :** Setting up of a Committee for recommending of special Incentivers and Concessions to Mega Projects – reg.

**Reference :** No. CIC / PS / IC-CELL / 2009-10, dated 15-01-2010.

**Preamble :**

Government is organizing a Global Investors Meet in June 2010. As per the New Industrial Policy 2009-14, mega investment projects may be offered special incentives and concessions over and above the incentives and concessions given in the Industrial Policy depending on the importance of the investment. Many mega investment proposals are being received and their requests are to be considered before GIM 2010. The process of sanctioning such special incentives has to be speeded up. Hence it is proposed to constitute a committee to examine and recommend the requests of the mega investment projects for special incentives and concessions for consideration of the cabinet / cabinet sub-committee.

Hence the following order.

**Government Order No. CI 52 SPI 2010, Bangalore Dated ; 10-02-2010.**

Government is pleased to constitute a committee for examining and recommending special incentives and concessions for mega investment projects as shown below :

| | | |
|---|---|---|
| 01 | The Additional Chief Secretary and Principal Secretary to Government, Finance Department. | Chairman |
| 02 | The Additional Chief Secretary to Government, Energy Department. | Member |
| 03 | The Principal Secretary to Government, Commerce and Industries Department. | Member |
| 04 | The Commissioner of Commercial Taxes, Bangalore. | Member |
| 05 | Commissioner for Indusdtrial Development, Director of Industries and Commerce. | Member-Secretary |

By Order and in the name of the Governor of Karnataka,

P.R. No. 431

**(Aparna Pavate)**
Desk Officer (Technical Cell)
Commerce & Industries Department

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ಮೂಅಇ 27 ರಾರಾಹೆ 08 ದಿನಾಂಕ 22-09-2009.

2. ಮುಖ್ಯ ಇಂಜಿನಿಯರ, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರುರವರ ದಿನಾಂಕ: 04-02-2010ರ ಪತ್ರ ಸಂಖ್ಯೆ : ಸಿಬಿಎಸ್ : ರೈಸುಕಾ : ಅನುದಾನ : 2009-10.

**ಪ್ರಸ್ತಾವನೆ :**

ಭದ್ರಾವತಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ. ಸಂ. 32ರ ಬದಲಿಗೆ ರಸ್ತೆ ಮೇಲು ಸೇತುವೆಗೆ ರೂ. 12.00 ಕೋಟಿಗಳ ಪರಿಷ್ಕೃತ ಅಂದಾಜಿನ ಕೂಡು ರಸ್ತೆ ನಿರ್ಮಾಣದ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2. ಎಲ್.ಸಿ. ಸಂಖ್ಯೆ 32 ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯು ಪ್ರಗತಿಯಲ್ಲಿದ್ದು ನಿಗದಿತ ಅವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕೆಂದು ಮೇಲೆ ಓದಲಾದ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 6.00 ಕೋಟಿಯನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (2) ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ (ದಕ್ಷಿಣ) ಮುಖ್ಯ ಇಂಜಿನಿಯರವರು ಕೋರಿದ್ದಾರೆ.

3. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 27 ರಾರಾಹೆ 2008, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ. 2.00 ಕೋಟಿಯನ್ನು (ರೂಪಾಯಿ ಎರಡು ಕೋಟಿಗಳು ಮಾತ್ರ) 2009-10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465-01-190-3-04-(ಯೋಜನೆ)-211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ / ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿಮೊಗ್ಗ ವಿಭಾಗ ಶಿವಮೊಗ್ಗ ಇವರು ಸವಿವರ ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

2. ಈ ಆದೇಶವನ್ನು ದಿನಾಂಕ 16-5-2008 ಸಂಖ್ಯೆ : ಎಫ್ ಡಿ 1ಟಿಎಫ್‌ಪಿ 2008 ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.432

**(ಎನ್. ಮಂಜುಳ ಗೀತ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಮೂಅಇ 34 ರಾರಾಹೆ 2009, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2010.**

ದಿನಾಂಕ 6-2-2010 ಸಂ.ಮೂಅಇ 34 ರಾರಾಹೆ 09ರ ಸರ್ಕಾರಿ ಆದೇಶ ಭಾಗದ ಮೊದಲನೇ ಪ್ಯಾರದ ಆರನೇ ಸಾಲಿನಲ್ಲಿರುವ "ಮಾಡಿರುವ ರೂ. 30.00 ಕೋಟಿಗಳಿಂದ ಬಿಡುಗಡೆ ಮಾಡಲಾಗಿದೆ" ಎಂಬುದರ ಬದಲಾಗಿ "ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ತುಮಕೂರು ವಿಭಾಗ, ತುಮಕೂರು ಇವರು ಸವಿವರ ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಆದೇಶ ಭಾಗದ 2ನೇ ಪ್ಯಾರ ಕೈಬಿಡಲಾಗಿದೆ. ಆದೇಶ ಭಾಗದ 3ನೇ ಪ್ಯಾರವನ್ನು 2ನೇ ಪ್ಯಾರವೆಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.433

**(ಎನ್. ಮಂಜುಳ ಗೀತ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ದಿನಾಂಕ 31–3–2010 ರೊಳಗೆ ನಡೆಸಬೇಕಾಗಿರುವ ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್ ಆರ್ ಡಿಇ / ಹೆಚ್ ಬಿಸಿ ಎಸ್ / ಚುನಾವಣೆ / 59 / 2009–10 ದಿನಾಂಕ 19–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘದ ಕಾರ್ಯದರ್ಶಿಯವರು ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ. ಬೆಂಗಳೂರು ಈ ಸಂಘವು 1450 ನೌಕರರು ಮತ್ತು ಅಧಿಕಾರಿಗಳನ್ನು ಹೊಂದಿದ್ದು ಇವರೆಲ್ಲರೂ ಸಂಪೂರ್ಣವಾಗಿ ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಗೆ ಒಳಪಡುವ ಎಲ್.ಆರ್.ಡಿ.ಇ. ಸಂಸ್ಥೆಯಲ್ಲಿ ವಿಜ್ಞಾನಿಗಳು ಹಾಗೂ ತಂತಜ್ಞರು ಆಗಿರುತ್ತಾರೆಂದೂ ಸದರಿ ಸಂಸ್ಥೆಯು ಕೇಂದ್ರ ಸರ್ಕಾರದ ವಾಯುಸೇನೆ ಹಾಗೂ ಭೂಸೇನೆಗಳ ನಿರ್ಮಾಣಕ್ಕೆ ಸಂಬಂಧಿಸಿದ ರಿಸರ್ಚ್ ಮತ್ತು ಡಿಸೈನಿಂಗ್ ಆಫ್ ರಡಾರ್‌ನ ತಂತ್ರಜ್ಞಾನ ನೀಡುವ ಮುಖ್ಯ ಉದ್ದೇಶವನ್ನು ಹೊಂದಿರುತ್ತದೆಂದೂ ಮಾರ್ಚ್ 2010ರ ಮಾಹೆಯಲ್ಲಿ ಈ ಸಂಸ್ಥೆಯ ವಿಜ್ಞಾನಿಗಳು ಹಾಗೂ ತಂತ್ರಜ್ಞರು ಕೇಂದ್ರ ಸರ್ಕಾರದ ಆಯವ್ಯಯದ ಸಿದ್ಧತೆಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದರಿಂದ ಹಾಗೂ ಮಾರ್ಚ್ ಮಾಹೆಯಲ್ಲಿ ತಂತ್ರಜ್ಞರು ರಾಷ್ಟ್ರಾದ್ಯಂತ ಇರುವ ತಮ್ಮ ವಿವಿಧ ಕೇಂದ್ರಗಳಿಗೆ ಭೇಟಿ ನೀಡಿ ರಡಾರ್‌ಗಳ ವಿನ್ಯಾಸ ಮತ್ತು ಸಂಶೋಧನೆಗಳಿಗೆ ಸಂಬಂಧಿಸಿದಂತೆ ಸಲಹೆ ಮತ್ತು ಮಾರ್ಗದರ್ಶನಗಳನ್ನು ನೀಡಬೇಕಾಗಿರುತ್ತದೆಂದೂ ಈ ಕಾರಣದಿಂದ ಮಾರ್ಚ್ 2010ರೊಳಗೆ ನಡೆಸಬೇಕಾಗಿರುವ ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿ ಚುನಾವಣೆಯಲ್ಲಿ ಸದಸ್ಯರು ಸಕ್ರಿಯವಾಗಿ ಪಾಲ್ಗೊಳ್ಳಲು ಸಾಧ್ಯವಾಗುವುದಿಲ್ಲವೆಂದೂ ಒಂದು ವೇಳೆ ಚುನಾವಣೆ ನಡೆಸಿದಲ್ಲಿ ಬಹತೇಕ ಸದಸ್ಯರು ಮತ ಚಲಾಯಿಸುವ ಹಕ್ಕಿನಿಂದ ವಂಚಿತರಾಗುತ್ತಾರಂದೂ ಆದ ಪ್ರಯುಕ್ತ ಪ್ರಜಾಸತ್ತಾತ್ಮಕ ಹಾಗೂ ಮೇಲೆ ತಿಳಿಸಿದ ಬಹುಮುಖ್ಯ ಕಾರಣಗಳಿಂದಾಗಿ ದಿನಾಂಕ : 31–03–2010ರೊಳಗೆ ನಡೆಸಬೇಕಾಗಿರುವ ಸಂಘದ ಆಡಳಿತ ಮಂಡಳಿ ಚುನಾವಣೆಯನ್ನು ಒಂದು ವರ್ಷದ ಕಾಲ ಮುಂದೂಡಿ ದಿನಾಂಕ : 31–03–2011ರ ಅಂತ್ಯಕ್ಕೆ ನಡೆಸಲು ಅನುಮತಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸಂಘದ ಮನವಿಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 22 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2010.**

ಮೇಲಿನ ಪರಿಸ್ಥಿತಿಯಲ್ಲಿ ಎಲ್.ಆರ್.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ (4), 28ಎ (5), 28ಬಿ (2), 29 ಎಫ್ (4) ಮತ್ತು 39ಎ (2) ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಸಿಒ 47 ಸಿಎಲ್ಎಂ 2009, ದಿನಾಂಕ : 04–03–2009 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 30–09–2010ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ (4), 28ಎ(5) 28ಬಿ(2), 29 ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2010ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.434

**(ಆರ್. ಎಸ್. ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## INFRASTRUCTURE DEVELOPMENT SECRETARIAT

**Sub :** Development of Green Field Airport at Bellary.

**Read :** 1. G.O. No. IDD 120 DIA 2008 dt 6-10-2008.
2. Letter No. iDeCK / 2008-09 / 983 DT 23rd December 2008 of COO, iDeCK.

**Preamble :**

In the G.O. dt 6-10-2008 read at Sl. No. (1) above, sanction was accorded for establishment of a new airport at Bellary through PPP on DBOT basis on the following terms:-

a) The State Government will acquire the extent of land identified by AAI and will be leased to the concerned concessionaire for a fixed period on a lease rent basis.
b) iDeCK shall be the nodal agency for this project and will obtain the required clearances for this project from the related departments / authorities.

2. In the letter read at Sl. No. (2) above, the first advertisement for development of Greenfield airport at Bellary was published on 24-12-2008 in the National / Local dailies indicating the schedule of bidding :-

i. Dt for issue of RFP-15-01-2009
ii. Bid due date-16-03-2009
iii. Bid opening date-17-03-2009

3. In response to the RFP, a single bid was received from M/s MARG and the same was opened on 22-01-10 at 4-00 p,m. Now it is proposed to constitute a tneder scrutiny committee as required under KTPP Act. Hence this Order.

**Government Order No. IDD 113 ITS 2009, Bangalore Dated ; 06-02-2010.**

As explained in the preamble, a tender Scrutiny Committee (TSC) is constituted to carryout the scrutiny of tenders with the following members.

i. Shri K. L. Lokanatha - Director
ii. Shri P.M.K. Aftab – Senior Programmer
iii. Smt K. R. Devika – Asst Director

2. The Tender Scrutiny Committee shall carry out scrutiny of the tenders strictly in accordance with evaluation criteria indicated in RFQ document and procedures specified by the GOI.

3. The Tender Scrutiny Committee shall ensure the confidentiality of the process of tender evaluation until orders on the tender are passed.

By Order and in the name of the Governor of Karnataka,

P.R. No. 435

**(N. Manjula Geetha)**
Dy. Secretary to Government (I/c),
Infrastructure Development Department.

## FOREST ECOLOGY AND ENVIRONMENT SECRETARIAT

**Sub :** Transfer of lease of diversion of 30.00 ha. of forest land out of 157.85 ha. allotted in Kappatgudda Reserve Forest, Mundargi Range, Gadag Division in favour of M/s Suzlon Energy Limited to the Investors/Power Producers for development of Wind Power Project.

**Read :**
1. Government of Karnataka Order No. FEE 172 FLL 2004,, dated: 13-03-2006.
2. Letter No. A5(2) GFL. CR.12/07-08, dated: 26-11-2008 of Principal Chief Conservator of Forests, Bangalore.
3. Guidelines of G.O.I. F.No. 8-84/2002-FC, dated: 14-05-2004 and 20-02-2006.
4. State Government letter No. FEE 202 FLL 2008, dt: 21-10-2009.
5. Letter No.8-101/2004-FC, dated: 08-01-2010. Of Government of India, Ministry of Environment and Forests, New Delhi.

**Preamble:**

Government of India in its letter dated: 06-03-2006 has accorded approval under Forest (Conservation) Act, 1980 for diversion of 157.85 ha. of forest land in Kappatgudda Hills in Gadag Division for establishing 75 MW Wind Power Project in favour of M/s Suzlon Energy Ltd., Bangalore and Government of Karnataka issued G.O. read at (1) above.

The Principal Chief Conservator of Forests, Bangalore vide their letter dated: 26-11-2008 has submitted a proposal read at (2) above to obtain approval of Government of India as per the Government of India guidelines dated: 14-5-2004 and 20-02-2006 read at (3) above issued under the Forest (Conservation) Act, 1980 for transfer of lease of forest lands diverted in favour of M/s Suzlon Energy Limited for establishment of Wind Power Project to the new user agencies i.e. Investors/Power Producers according to the list as appended.

The original user agency i.e. M/s Suzlon Energy Limited, Bangalore has proposed to transfer of diversion of 30.00 ha. of forest land out of 157.85 ha. already diverted in favour of him to the new user agencies. The original user agency has submitted no objection certificate for such transfer and the new user agency have submitted an under taking that they will abide by the conditions stipulated by Government of India and Government of Karnataka.

Accordingly the proposal was recommended to Government of India vide State Government letter dated: 21-10-2009 read at (4) above.

Government of India, Ministry of Environment and Forests, New Delhi vide their letter dated: 08-01-2010 read at (5) above has conveyed its approval for transfer of lease from M/s Suzlon Energy Limited, the original user agency, to the new User Agencies i.e., Investors/power producers.

The proposal has been examined in detail and hence the order.

**Government Order No. FEE 202 FLL 2008, Bangalore, dated : 01-02-2010.**

In the circumstances explained in the preamble, Government are pleased to accord sanction for transfer of lease as per the Guidelines issued by Government of India on 14-05-2004 and 20-02-2006 Under Forest (Conservation) Act, 1980, from M/s Suzlon Energy Limited, the original User Agency, to the 44 new User Agencies i.e., the investors/power producers for 30.00 ha. of forest land out of 157.85 ha. of forest land in favour of M/s Suzlon Energy Limited for establishment of 75 MW Wind Power Project in

Kapatagudda Reserve Forest, Mundargi Range, Gadag Division, area as already diverted. The list of new User Agencies/power producers is enclosed in the Annexure.

The transfer of lease is subject to the condition that the new User Agencies i.e, the investors/power producers, shall abide by all the conditions imposed already in the Government Order No. FEE 172 FLL 2004, dated: 13-03-2006.

By order and in the name of the Governor of Karnataka

(H.M. MALLIKARJUNA SWAMY)
Under Secretary to Government
Forest, Ecology and Environment Department

**ANNEXURE**

(For G.O. No. FEE 202 FLL 2008, Dated: 01-02-2010)

| Sl. No. | Name of the Investors/New User Agency | Power to be generated (No. of MC) | Forest land to be transferred out of approved are (in Ha) | Balance are remaining with original user agency (in ha) |
|---|---|---|---|---|
| 1. | M/s Globe Transport Co. Pvt. Ltd. | 1.25 MW, 1 WTGS | 0.25 | 127.85 |
| 2. | M/s VM Salgaocar & Brother LTD | 3.75 MW, 3 WTGS | 0.75 | |
| 3. | M/s Vandana Global LTD | 1.25 MW, 1 WTGS | 0.25 | |
| 4. | M/s Indian Wind Energy Association | 1.25 MW, 1 WTGS | 0.25 | |
| 5. | M/s Triveni Enterprises | 1.25 MW, 1 WTGS | 0.25 | |
| 6. | M/s Research Dev. & MFG Corporation | 1.25 MW, 1 WTGS | 0.25 | |
| 7. | M/s BSK Trading INC | 2.50 MW, 2 WTGS | 0.5 | |
| 8. | M/s Shakambhri Enterprises | 2.50 MW, 2 WTGS | 0.5 | |
| 9. | M/s E. Ramamurthy | 2.50 MW, 2 WTGS | 0.5 | |
| 10. | M/s Ensenble Infrastructure LTD | 1.25 MW, 1 WTGS | 0.25 | |
| 11. | M/s Vishwa Vishal Engg. LTD. | 1.25 MW, 1 WTGS | 0.25 | |
| 12. | M/s Navbharath International LTD | 1.25 MW, 1 WTGS | 0.25 | |
| 13.. | M/s Ramesh Kumar Hanjarimal Rathod | 1.25 MW, 1 WTGS | 0.25 | |
| 14. | M/s VSL Mining Projects Pvt. Ltd. | 2.50 MW, 2 WTGS | 0.5 | |
| 15. | M/s VSL Mining Company Pvt. Ltd. | 6.25 MW, 5 WTGS | 1.25 | |
| 16. | M/s VSL Lad & Sons | 6.25 MW, 5 WTGS | 1.25 | |
| 17. | M/s Suresh Kumar Sharma | 1.25 MW, 1 WTGS | 0.25 | |
| 18. | M/s Happy Valley Developers | 1.25 MW, 1 WTGS | 0.25 | |
| 19. | M/s MPR Wind Farms | 1.25 MW, 1 WTGS | 0.25 | |
| 20. | M/s Revathi Raju | 3.75 MW, 1 WTGS | 0.75 | |
| 21. | M/s Bhagyanagar India Ltd. | 9 MW, 7 WTGS | 1.75 | |
| 22. | M/s Nuziveedu Seeds Ltd | 5 MW, 4 WTGS | 1.00 | |
| 23. | M/s VRL Logistics | 42.50 MW, 34 WTGS | 8.5 | |
| 24. | M/s Jindal Steel | 1.25 MW, 1 WTGS | 0.25 | |

| | | | | |
|---|---|---|---|---|
| 25. | M/s Kashyap J Majethia | 1.25 MW, 1 WTGS | 0.25 | |
| 26. | M/s Magnum Intergrafiks (P) Ltd | 1.25 MW, 1 WTGS | 0.25 | |
| 27. | M/s Mukund Kamath S | 1.25 MW, 1 WTGS | 0.25 | |
| 28. | M/s Arathi V Patil | 1.25 MW, 1 WTGS | 0.25 | |
| 29. | M/s Vinay Patil | 1.25 MW, 1 WTGS | 0.25 | |
| 30. | M/s Bharathi P Holekunde | 1.25 MW, 1 WTGS | 0.25 | |
| 31. | M/s Mac Charles (India) Ltd | 2.50 MW, 1 WTGS | 0.5 | |
| 32. | M/s VM Salgaocar Sales INT. | 3.75 MW, 3 WTGS | 0.75 | |
| 33. | M/s VM Salgoacar BRO Pvt Ltd | 10 MW, 8 WTGS | 2 | |
| 34. | M/s Manoj V. Telisara | 1.25 MW, 1 WTGS | 0.25 | |
| 35. | M/s Surana Telecom Ltd | 1.25 MW, 1 WTGS | 0.25 | |
| 36. | M/s Vikram Traders | 3 MW, 2 WTGS | 0.5 | |
| 37. | M/s Sapthagiri Distrilleries | 3 MW, 2 WTGS | 0.5 | |
| 38. | M/s BD Patil Co | 1.25 MW, 1 WTGS | 0.25 | |
| 39. | M/s Bharath Petroleum Corp Ltd | 5 MW, 4 WTGS | 1 | |
| 40. | M/s Indian Designs | 1.5 MW, 1 WTGS | 0.25 | |
| 41. | M/s Bharath Earth Movers Ltd | 5 MW, 4 WTGS | 1 | |
| 42. | M/s SC Shettars & Sons | 1.25 MW, 1 WTGS | 0.25 | |
| 43. | M/s Swarna Constructions | 1.25 MW, 1 WTGS | 0.25 | |
| 44. | M/s KMMI Steels Pvt Ltd | 1.5 MW, 1 WTGS | 0.25 | |
| | TOTAL | 157.85 | 30 | |
| | | 0 | 127.85 | |
| | GRAND TOTAL | 157.85 | 157.85 | |

PR 506

**(H.M. Mallikarjuna Swamy)**
Under Secretary to Government
Forest, Ecology and Environment Departmen

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 16 ಪೊಸಿಲಿ 2010, ಬೆಂಗಳೂರು, ದಿನಾಂಕ: 15–02–2010**

ಶ್ರೀ ಎಸ್.ಆರ್. ಶಿವಾನಂದಮೂರ್ತಿ, ನಿವೃತ್ತ ಎ.ಎ.ಓ. ರವರಿಗೆ ನಿವೃತ್ತಿ ವೇತನ ಮತ್ತು ಉಪದಾನಕ್ಕೆ ಅರ್ಹತಾದಾಯಕ ಸೇವೆಯನ್ನು ಪರಿಗಣಿಸುವ ಬಗ್ಗೆ ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಒಇ 12 ಪೊಸಿಲಿ 2008 ದಿನಾಂಕ 12–11–2009 ರಲ್ಲಿಯ ಆದೇಶ ಭಾಗದಲ್ಲಿ "ದಿನಾಂಕ 05–07–1973 ರಿಂದ 20–06–1997" ಎಂಬುದರ ಬದಲು "ದಿನಾಂಕ 05–07–1973 ರಿಂದ 20–06–1977" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 507

**(ಟಿ.ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಭಾರತ ರತ್ನ ಡಾ: ಬಿ.ಆರ್. ಅಂಬೇಡ್ಕರ್ ಇವರ ಭಾವಚಿತ್ರವನ್ನು ಸರ್ಕಾರಿ ಕಛೇರಿ ಹಾಗೂ ಶಾಲಾ ಕಾಲೇಜುಗಳಲ್ಲಿ ಹಾಕುವ ಬಗ್ಗೆ.

**ಓದಲಾಗಿದೆ :** (1) ಸುತ್ತೋಲೆ ಸಂ: ಸಿಆಸುಇ 68 ರಾರಾಆ 2008 ದಿನಾಂಕ: 31–12–2008.

**(2) ದಿನಾಂಕ**: 01–02–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡಾವಳಿಗಳು.

**ಪ್ರಸ್ತಾವನೆ :**

ಸಂವಿಧಾನ ಶಿಲ್ಪಿ ಡಾ: ಬಿ.ಆರ್. ಅಂಬೇಡ್ಕರ್ ಇವರ 52ನೇ ಪುಣ್ಯತಿಥಿ ಅಂಗವಾಗಿ ದಿನಾಂಕ: 06–12–2008 ರಂದು ಏರ್ಪಡಿಸಿದ ಸಭೆಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ಮಾತನಾಡುತ್ತಾ ಡಾ: ಬಿ.ಆರ್. ಅಂಬೇಡ್ಕರ್ ಇವರ ಭಾವಚಿತ್ರವನ್ನು ಎಲ್ಲಾ ಸರ್ಕಾರಿ ಕಛೇರಿಗಳು ಹಾಗೂ ಶಾಲಾ ಕಾಲೇಜುಗಳಲ್ಲಿ ಕಡ್ಡಾಯವಾಗಿ ಹಾಕಿಸುವಂತೆ ಸೂಚಿಸಿದ್ದರು. ಡಾ: ಬಿ.ಆರ್. ಅಂಬೇಡ್ಕರ್ ಇವರ ಭಾವಚಿತ್ರದ ಪ್ರತಿಗಳನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯಿಂದ ಪಡೆದು ಅದಕ್ಕೆ ಕಟ್ಟು ಹಾಕಿಸಿ ಎಲ್ಲಾ ಕಛೇರಿಗಳಲ್ಲಿ ಅಳವಡಿಸಲು ಕ್ರಮವಹಿಸಬೇಕೆಂದು ಮೇಲೆ (1)ರಲ್ಲಿ ಓದಲಾದ ಸುತ್ತೋಲೆಯಲ್ಲಿ ಸೂಚಿಸಲಾಗಿತ್ತು. ನಂತರ ದಿನಾಂಕ: 01–02–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಲಾಗಿ ಡಾ: ಬಿ.ಆರ್. ಅಂಬೇಡ್ಕರ್ ಇವರ ಭಾವಚಿತ್ರವನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರತಿಗಳನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ ಸರ್ಕಾರಿ ಕಛೇರಿಗಳು, ಶಾಲಾ ಕಾಲೇಜುಗಳಿಗೆ ಸರಬರಾಜು ಮಾಡಬೇಕಾದ ದಿಸೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 113 ಪಕಸೇ 2009, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2010**

ಸಂವಿಧಾನ ಶಿಲ್ಪಿ ಡಾ: ಬಿ.ಆರ್. ಅಂಬೇಡ್ಕರ್ ಇವರ ಭಾವಚಿತ್ರವನ್ನು (ಫ್ರೇಮ್ ಹಾಕಿಸಿ) ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ ಎಲ್ಲ ಸರ್ಕಾರಿ ಕಛೇರಿಗಳು, ಶಾಲಾ ಕಾಲೇಜುಗಳಲ್ಲಿ ಅಳವಡಿಸುವುದರ ಉಸ್ತುವಾರಿ ನೋಡಿಕೊಳ್ಳಲು ಈ ಕೆಳಗಿನ ಸಮಿತಿಗಳನ್ನು ರಚಿಸಲಾಗಿದೆ:–

**ರಾಜ್ಯ ಮಟ್ಟದ ಸಮಿತಿ:**

| | | |
|---|---|---|
| (1) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | – | ಅಧ್ಯಕ್ಷರು |
| (2) ಸರ್ಕಾರದ ಕಾರ್ಯದರ್ಶಿಗಳು, ಸಿ.ಆ.ಸು. ಇಲಾಖೆ | – | ಸದಸ್ಯರು |
| (3) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ | – | ಸದಸ್ಯರು |
| (4) ನಿರ್ದೇಶಕರು, ಸರ್ಕಾರಿ ಮುದ್ರಣಾಲಯ | – | ಸದಸ್ಯರು |
| (5) ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ | – | ಸದಸ್ಯರು |
| (6) ಸರ್ಕಾರದ ಜಂಟಿ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ | – | ಸದಸ್ಯ – ಕಾರ್ಯದರ್ಶಿ |

**ಜಿಲ್ಲಾ ಮಟ್ಟದ ಸಮಿತಿ:**

| | | |
|---|---|---|
| (1) ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| (2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ | – | ಸದಸ್ಯರು |
| (3) ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿ | – | ಸದಸ್ಯರು |
| (4) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | – | ಸದಸ್ಯರು |
| (5) ಉಪ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ | – | ಸದಸ್ಯರು |
| (6) ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ | – | ಸದಸ್ಯ – ಕಾರ್ಯದರ್ಶಿ |

**ಈ ಸಮಿತಿಗಳ ಜವಾಬ್ದಾರಿಗಳು ಈ ಕೆಳಗಿನಂತಿವೆ.**

(1) ಭಾವಚಿತ್ರವನ್ನು ಜಿಲ್ಲೆಯ ಎಲ್ಲಾ ಸರ್ಕಾರಿ ಕಛೇರಿ, ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಿಗೆ ವಿತರಿಸುವ ಮತ್ತು ಅಳವಡಿಸುವ ಕಾರ್ಯವನ್ನು ಜಿಲ್ಲೆ ಮಟ್ಟದ ಸಮಿತಿ ನೋಡಿಕೊಳ್ಳತಕ್ಕದ್ದು.

(2) ಸಂಬಂಧಪಟ್ಟ ಇಲಾಖೆಗಳು/ಸಂಸ್ಥೆಗಳು ಭಾವಚಿತ್ರಕ್ಕೆ ಉತ್ತಮ ಗುಣಮಟ್ಟದ ಕಟ್ಟು (ಫ್ರೇಮ್) ಹಾಕಿಸಿ ಅವರವರ ಕಛೇರಿ/ಸಂಸ್ಥೆಗಳಲ್ಲಿ ಸೂಕ್ತ ಜಾಗದಲ್ಲಿ ಇರಿಸತಕ್ಕದ್ದು. ಫ್ರೇಮ್ ಹಾಕುವ ವೆಚ್ಚವನ್ನು ಸಂಬಂಧಪಟ್ಟ ಇಲಾಖೆಗಳು/ಸಂಸ್ಥೆಗಳು ಭರಿಸತಕ್ಕದ್ದು.

(3) ಈ ಸಂಬಂಧ ಕೆಲವು ಕಛೇರಿ ಹಾಗೂ ಶಾಲೆಗಳಿಗೆ ಭೇಟಿ ನೀಡುವ ಮುಖಾಂತರ ಭಾವಚಿತ್ರವನ್ನು ಕಛೇರಿಯ ಪ್ರಧಾನ ಭಾಗದಲ್ಲಿ ಪ್ರದರ್ಶಿಸಲಾಗುತ್ತಿದೆಯೇ? ಎಂಬುದನ್ನು ಖಚಿತಪಡಿಸಿಕೊಂಡು ತ್ರೈಮಾಸಿಕ ವರದಿಯನ್ನು ರಾಜ್ಯ ಮಟ್ಟದ ಸಮಿತಿಗೆ ಸಲ್ಲಿಸತಕ್ಕದ್ದು.

(4) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಪ್ರತಿ ಜಿಲ್ಲೆಗೆ ಬೇಕಾಗುವ ಭಾವಚಿತ್ರದ ಪ್ರತಿಗಳನ್ನು ಜಿಲ್ಲಾಧಿಕಾರಿಗಳಿಗೆ ಸರಬರಾಜು ಮಾಡತಕ್ಕದ್ದು.

(5) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಕಛೇರಿಯ ಉಪ ನಿರ್ದೇಶಕರು (ಆಡಳಿತ) ಇವರನ್ನು ಸಮನ್ವಯ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 508

**(ಅಶೋಕ್‌ಕುಮಾರ್ ಜಿ.)**

ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ)

ಸಮಾಜ ಕಲ್ಯಾಣ ಇಲಾಖೆ

## ENERGY SECRETARIAT

**Sub :** Allotment of 5.00 MW capacity of Grid Connected Solar Photovoltaic Power Plant to M/s Vishrutha Power Pvt. Ltd.-reg.

**Read :**
1. Ministry of New & Renewable Energy, Government of India, New Delhi letter No.: 32/61/2007-08/PVSE dated: 24-1-2008.
2. Letter No.: KRED/07/SPVGCPP/2009/4016 dated: 5/7-12-2009 and No.: KRED/07/SPVGCPP/2009/22 dated: 6-1-2010 received from the Managing Director, Karnataka Renewable Energy Development Limited, Bangalore.

**Preamble:**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy Development Limited, Bangalore has recommended for allotment of 5.00 MW capacity of Grid Connected Solar Photovoltaic Power Plant to M/s VIshrutha Power Pvt. Ltd. at Bellary Taluk and District.

Hence the Order:-

**GOVERNMENT ORDER NO. EN 616 NCE 2009 BANGALORE, DATED : 16-02-2010.**

Government accords approval for allotment of 5.00 MW capacity of Grid Connected Solar Photovoltaic Power Plant to M/s Vishrutha Power Pvt. Ltd. at Bellary taluk and District subject to the following conditions:-

1(a) The allottee shall execute an agreement with Government within 45 days from the date of the capacity allotment order failing which the allotment order shall become automatically lapsed. There shall be no refund of the application fee of Rs. 10,000/- per M.W. received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee as per Government Order.

2(a) The project Developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc. Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable date to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.

4. The allottee shall take action to complete the project implementation within 12 months from the date of achieving financial closure.

5. Failure to reach any of the project milestones specified in Sl. No. 2,3, & 4 in the same order would constitute sufficient grounds to result in automatic cancellation of allotment. No notice on this account will be given to the allottee.

6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE of SELLING POWER TO the third party and in case of Power Purchase Agreement with KPTCL / concerned ESCOMs.

7. The allottee Company may seek full co-operation from the concerned Officers of the Government at the District and State level to ensure speedy completion of the project.

8. In the allotted site if any of the Government Project comes up, the Government Projects will have priority and the developer should not claim any compensations.

9. Government has reserved the power to cancel/modify this Order.

10. The Developer is wholly responsible for the objections raised by local people if any.

By Order and in the name of the Governor of Karnataka

**(S.J. SAMPATH KUMAR)**
Under Secretary to Government
Energy Department.

PR NO. 509

## ENERGY SECRETARIAT

**Sub :** Transfer of 39.2 MW wind power capacity in favour of M/s EN Renewable Energy Limited-reg.

**Read :**
1. Government Order No. EN 201 NCE 2005 dated: 18-8-2005.
2. Government Order No. EN 398 NCE 2005 dated: 20-4-2006.
3. Government Order No. EN 200 NCE 2006 dated: 19.5.2006.
4. Letter No. KRED/08/ENREL-EIL/2010/241 dated: 20/23.1.2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, approval has been accorded for implementation of 37.6 MW capacity wind power project at Shimoga and Belgaum Districts in favour of M/s Enercon India Limited.

In the Government Order read at (2) above, approval has been accorded for implementation of 236.81 MW capacity wind power project at Gadag and Belgaum Districts in favour of M/s Enercon India Limited.

In the Government Order read at (3) above, approval has been accorded for enhancement of wind power capacity from 37.6 MW to 89.6 MW.

The Managing Director, Karnataka Renewable Energy Development Limited, Bangalore in his letter read at (4) above has recommended for transfer of 39.2 MW wind power capacity from out of 236.81 MW (24.8 MW) and 89.6 MW (14.4) in favour of M/s EN Renewable Energy Limited from M/s Enercon India Limited at Belgaum District.

The proposal has been examined in detail and the following Orders are issued:-

**GOVERNMENT ORDER NO. EN 26 NCE 2010 BANGALORE, DATED : 16-02-2010.**

Government accords approval for transfer of 39.2 MW wind power capacity from out of 236.81 MW (24.8 MW) and 89.6 MW (14.4) in favour of M/s EN Renewable Energy Limited from M/s Enercon India Limited as detailed below and subject to the following conditions:-

| Sl. No. | Village name | G.O. NO. And date | Land Servey number | No. of WEG's | Total No. of WEG's | Capacity in MW | Taluk & District |
|---|---|---|---|---|---|---|---|
| A | Sonahatti | EN 398 NCE 2005 Dated: 20.4.2006 | 2 | 1 | 17 | 13.6 | Belgaum District |
| | Kakthi | | 98 | 5 | | | |
| | Kakthi | | 99 | 4 | | | |
| | Kakthi | | 173 | 5 | | | |
| | Kakthi | | 176 | 2 | | | |
| | Kanabargi | | 60 | 1 | 4 | 3.2 | |
| | Kakthi | | 176 | 3 | | | |
| | Ganginahal | | 32 | 1 | 4 | 3.2 | |
| | Sonahatti | | 2 | 2 | | | |
| | Nandi | | 41A | 1 | | | |
| | Kanabargi | | 60 | 1 | 6 | 4.8 | |
| | Bharmenhatti | | 18 | 5 | | | |
| | | | | | **31 No's** | **24.8 MW** | |

| | | | | | | | |
|---|---|---|---|---|---|---|---|
| B | Sonahatti | | 2 | 1 | | | |
| | Bharmenhatti | EN 200 | 18 | 2 | | | |
| | Bharmenhatti | NCE 2006 | 26 | 1 | 18 | 14.4 | Belgaum |
| | Bharmenhatti | Dated: | 16 | 2 | | | District |
| | Bharmenhatti | 19.5.2006 | 13 | 1 | | | |
| | Nandi | | 41A | 11 | | | |
| | | | | | **18 No's** | **14.4 MW** | |
| | **Total A & B** | | | | **49 No's** | **39.2 MW** | |

1 M/s EN Renewable Energy Limited shall execute an agreement with Government within 45 (forty five) days from the date of issue of this Order.

2 PPA is assigned to BESCOM. BESCOM shall execute the PPA/Wheeling and Banking with M/s EN Renewable Energy Limited within a period of one month.

3 The Government has reserved the power to Cancel/modify this Order.

The other terms and conditions of the Government Order No.: EN 201 NCE 2005 dated: 18-8-2005 and Government Order No.: EN 398 NCE 2005 dated: 20-04-2006 shall IPSO FACTO applicable

By Order and in the name of the Governor of Karnataka

**(S.J. SAMPATH KUMAR)**
Under Secretary to Government
Energy Department.

PR NO. 510

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ದೀಪಕ್ ಹುಕುಂಚಂದ್ ಓಸ್ವಾಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮುಧೋಳ್ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ, ತೃಪ್ತಿಕರವೆಂದು ಘೋಷಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ : 03–05–2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ.1/ 37 (26) / 2008–09, ದಿನಾಂಕ : 02–11–2009

**ಪ್ರಸ್ತಾವನೆ :**

ಶ್ರೀ ದೀಪಕ್ ಹುಕುಂಚಂದ್ ಓಸ್ವಾಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮುಧೋಳ್ ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ : 03–05–2006ರ ಅಧಿಸೂಚನೆಯಲ್ಲಿ (ಕ್ರ.ಸಂ. 26) ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ : 16–05–2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ.

2. ಸದರಿ ಅಧಿಕಾರಿಯ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ದಿನಾಂಕ : 15–05–2008ಕ್ಕೆ ಪೂರ್ಣಗೊಂಡಿರುತ್ತದೆ. ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣತೆ ಹೊಂದದೆ, ನಂತರ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಪರೀಕ್ಷಾ ಫಲಿತಾಂಶವು ದಿನಾಂಕ : 02–07–2009ರ ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ. ಉಳಿದಂತೆ ಇಲಾಖೆ ಪರೀಕ್ಷೆಗಳಲ್ಲೊಂದಾದ ಜನರಲ್ ಲಾ ಭಾಗ–1 ಅನ್ನು ಪರಿವೀಕ್ಷಣಾ ಅವಧಿಯೊಳಗೆ ಪಾಸು ಮಾಡಿರುತ್ತಾರೆ.

3. ಈ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07, 2007–08 ಮತ್ತು 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಅಧಿಕಾರಿಯವರು ಸದರಿ ಅವಧಿಯಲ್ಲಿ ಇಲಾಖೆಯ ಅವಕೃಪೆಗೆ ಒಳಗಾಗಿರುವುದಿಲ್ಲ ಮತ್ತು ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

3. ಆದುದರಿಂದ ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ 1(i)ರ ಅನ್ವಯ ದಿನಾಂಕ : 16–11–2008 ರಿಂದ 02–07–2009ರವರೆಗೆ ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ದಿನಾಂಕ : 03–11–2009ರಿಂದ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. : ಒಇ 447 ಪಿಪಿಇ 2009, ಬೆಂಗಳೂರು, ದಿನಾಂಕ : 10ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರಿಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)(i) ರನ್ವಯ ಶ್ರೀ ದೀಪಕ್ ಹುಕುಂಚಂದ್ ಓಸ್ವಾಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮುಧೋಳ್ ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 16–11–2008 ರಿಂದ 02–07–2009 ರವರೆಗೆ ವಿಸ್ತರಿಸಿ, 1977ರ ಕರ್ನಾಟಕ ನಾಗರಿಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ : 03–07–2009 ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್.451

## ಇಂಧನ ಸಚಿವಾಲಯ

**ವಿಷಯ :** ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸುಲೆಕೆರಿಮೊಗರು/2007/1829 ದಿನಾಂಕ : 30–07–2007/16–08–2007.

2. ದಿನಾಂಕ 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಸುಲೆಕೆರಿ ಮೊಗರು ಗ್ರಾಮದ ಬಳಿ ಅಲದಂಗಡಿ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 571 ಎನ್‌ಸಿಇ 2009, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2010.**

ಮೆ॥ ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಸುಲೆಕೇರಿ ಮೊಗರು ಗ್ರಾಮದ ಬಳಿ ಅಲದಂಗಡಿ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: 13$^{o}$26'00" Longitude:75$^{o}$13'27" Power House-Latitude: 13$^{o}$26'08'' Longitude:75$^{o}$22'40'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ

(ಇ) ಒಡಂಬಡಿಕೆಯನ್ನು ರೂ. 400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 452

**(ಎಸ್. ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ENERGY SECRETARIAT

### CORRIGENDUM

### No: EN 451 NCE 2009, Bangalore, Date : 10-02-2010

In the Government Order No : EN 451 NCE 2009 dated : 17-08-2009 the "Serial No. 2 of Read" portion shall be substituted by "Government Order No : EN 146 NCE 2009 dated : 31-03-2009".

The second para of the preamble portion of the Government Order No : EN 451 NCE 2009 dated : 17-8-2009 shall be substituted by the following para :-

"In the Government Order read at (2) above sanction has been accorded for the transfer of 1.25 MW wind power capacity in favour of M/s P. Venganna Setty & Brothers at Kanavihalli village, Sogi Reserved Forest area (Survey No : 195), Harapanahalli Taluk, Davangere District."

In the Order portion of the Government Order No : EN 451 NCE 2009 dated : 17-08-2009 the name appearing as "M/s P. Venganna Setty & Brothers (Phase-2)" shall be read as : "M/s P. Venganna Setty & Brothers".

By Order and in the name of the Governor of Karnataka

**(S.J. SAMPATH KUMAR)**
Under Secretary to Government
Energy Department.

PR NO. 453

## HEALTH AND FAMILY WELFARE SECRETARIAT

**Sub :** According to administrative approval to the estimates for construction of ANM Sub-Centres in alternate places under SICF component of KHSDRP- reg.

**Read :** 1) Govt Order No. HFW/KHSDRP/SECT/Civ-1/2007-08 Bangalore dt. 9-11-2007.
2) Proceedings of the 19th meeting of Programme Steering Committee dt.04-01-2010.

**Preamble :**

In the Government Order read at (1) above, Government have accorded administrative approval to the estimates for construction of ANM Sub-Centres at Benal in Basavana Bagewadi Taluk, Bijapur District and Budihal in Indi Taluk, Bijapur District. They were approved for Rs. 16.00 lakhs each under SICF Component of World Bank assisted Karnataka Health System Development and Reform Project (KHSDRP). Since, the site at Budihal is not available, it is decided to take up the construction of ANM

Sub-Centre at Bathagunki instead of Budihal as decided earlier. Likewise the tender for construction of ANM Sub-Centre at Benal was not called for, because, KBJNL had already taken up the work. Therefore, it is decided to take up the work at Mannur, Basavana Bagewadi Taluk instead of Benal.

The Executive Engineer, KHSDRP Division, Dharwad have submitted detailed fresh estimates amounting to Rs. 17.50 lakhs each, based on SR of PWD, Belgaum Circle for 2008-09 for construction of ANM Sub-Centres in the alternate places and have sought administrative approval for the same.

Accordingly, Programme Steering Committee in its meeting held on 4.1.2010 has accorded approval for the above fresh estimates and take up the works as per Local Shopping Procedure of the World Bank's approved Procurement Plan.

Hence the following Order.

**Govt. Order No. HFW/KHSDRP/Sect/Civil-3/2007-08, Bangalore, dated : 15-02-2010**

Under the circumstances stated above, administrative approval is accorded for the estimates for construction of ANM Sub-Centres in alternate places at Mannur in lieu of Benal in Basavana Bagewadi Taluk, Bijapur district and Bathagunki in lieu of Budihal in Indi Taluk, Bijapur Diustrict each amounting to Rs. 17.50 lakhs and to take up the works as per local shopping procedure of the World Bank approved Procument Plan.

The above expenditure is debitable to the Head of Account "4210-01-110-1-87-139 (SICF Component)" for the corresponding financial year.

By Order and in the name of the Governor of Karnataka
**M. SHASHIDHAR**
Deputy Secretary to Government
KHSDRP
Health and Family Welfare Department.

P.R.454

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನಃಶ್ಚೇತನಕ್ಕೆ ಸರ್ಕಾರದಿಂದ ಆರ್ಥಿಕ ನೆರವು– 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಹಣದ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಸಿಐ 70 ಎಸ್‌ಜಿಎಫ್ 2009 ದಿನಾಂಕ : 03–08–2009.
ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ : ಎಂಎಸ್‌ಕೋ/ಎಂಡಿ/ಡಿಬ/790 ದಿನಾಂಕ : 01–01–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯ ಪುನಶ್ಚೇತನಕ್ಕಾಗಿ ರೂ. 10.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವ ಯೋಜನಾ ವರದಿಯನ್ನು 50.00 ಕೋಟಿ ರೂ.ಗಳ ಬದಲಿಗೆ 61.70 ಕೋಟಿ ರೂ.ಗಳಿಗೆ ಪರಿಷ್ಕರಿಸಿಕೊಳ್ಳುವಂತೆ ವರದಿ ಮಾಡಿ 2009–10ನೇ ಸಾಲಿನ ಆಯವ್ಯಯದಲ್ಲಿ ಕಾರ್ಖಾನೆಯ ಪುನಃಶ್ಚೇತನಕ್ಕಾಗಿ ಒದಗಿಸಲಾಗಿರುವ 50.00 ಕೋಟಿ ರೂ.ಗಳ ಅನುದಾನದಲ್ಲಿ ದುಡಿಯುವ ಬಂಡವಾಳಕ್ಕಾಗಿ ರೂ. 6.20 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2009–10ನೇ ಸಾಲಿನ ಅನುದಾನದಲ್ಲಿ ಒದಗಿಸಲಾಗಿರುವ 50.00 ಕೋಟಿ ರೂ.ಗಳಲ್ಲಿ ಕಾರ್ಖಾನೆಗೆ ಬಂಡವಾಳ ಹೂಡಿಕೆಗಾಗಿ 5.00 ಕೋಟಿ ರೂ.ಗಳನ್ನು ಕಾರ್ಖಾನೆಗೆ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 70 ಎಸ್‌ಜಿಎಫ್ 2009 (2), ಬೆಂಗಳೂರು, ದಿನಾಂಕ : 15ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ, ಈ ಕಾರ್ಖಾನೆಗೆ 2009-10ನೆ ಸಾಲಿಗೆ ಕಾರ್ಖಾನೆಯ ಪುನಶ್ಚೇತನ ಸಂಬಂಧ ಬಂಡವಾಳ ಹೂಡಿಕೆಗಾಗಿ 5.00 ಕೋಟಿ ರೂ.ಗಳನ್ನು (ಐದು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2009-10ನೇ ಸಾಲಿನ ಅನುದಾನದಲ್ಲಿ ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಲೆಕ್ಕಶೀರ್ಷಿಕೆ "4852-02-190-0-04 (ಯೋಜನೆ) 211 - ಹೂಡಿಕೆ" ಅಡಿಯಲ್ಲಿ ಒದಗಿಸಲಾಗಿರುವ 50.00 ಕೋಟಿ ರೂ.ಗಳಲ್ಲಿ ಎರಡನೆಯ ಕಂತು 5.00 ಕೋಟಿ ರೂ.ಗಳನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 185 ವೆಚ್ಚ-1/2010 ದಿನಾಂಕ : 08-02-2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.455

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಅಧೀಕ್ಷಕ ಅಭಿಯಂತರ ಮುಖ್ಯ ಕಛೇರಿಯಲ್ಲಿ ಮತ್ತು ಹೊಸದಾಗಿ ಸೃಜಿಸಲಾಗಿರುವ 7 ಉಪ ವಿಭಾಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಹಾಯಕ/ಕಿರಿಯ ಅಭಿಯಂತರರಿಗೆ, ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು, ಇವರ ಸಿಯುಜಿ, ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸಿಮ್ ಕಾರ್ಡ್‌ಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1) ಅಧೀಕ್ಷಕ ಅಭಿಯಂತರರು, ಕೆಹೆಚ್‌ಎಸ್‌ಡಿಆರ್‌ಪಿರವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಕುಕ/ ಕೆಹೆಚ್‌ಎಸ್‌ಡಿಆರ್‌ಪಿ/ಅಅ/ಬೆಂ/ಸಿ3/ಸಿಮ್/2009-10/1207 ದಿನಾಂಕ: 7-12-2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯನ್ವಯ ಅಭಿಯಂತರರ ಶಾಖೆಯ ಮುಖ್ಯ ಕಛೇರಿಗೆ ಕೆಲವು ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿರುತ್ತದೆ ಮತ್ತು ಹೊಸ ಉಪ ವಿಭಾಗಗಳಲ್ಲಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಹಾಯಕ/ಕಿರಿಯ ಅಭಿಯಂತರರು ಇವರುಗಳೊಂದಿಗೆ ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸಬೇಕಾದ/ಕೈಗೊಳ್ಳಬೇಕಾದ ಯೋಜನೆಗಳ ಕಾಮಗಾರಿಗಳ ಬಗ್ಗೆ ಸಂಪರ್ಕಿಸಬೇಕಾಗುತ್ತದೆ ಮತ್ತು ಆಗಿಂದಾಗ್ಗೆ ಕಾಮಗಾರಿಗಳ ಪ್ರಗತಿಯ ಬಗ್ಗೆ ಮಾಹಿತಿಯನ್ನು ಪಡೆಯಲು, ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವವರಿಂದ ಅಗತ್ಯ ಮಾಹಿತಿಗಳನ್ನು ಪಡೆಯಲು ಮತ್ತು ಸದರಿ ಶಾಖೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಬೆಂಗಳೂರು ಇವರ ವತಿಯಿಂದ ಕಾರ್ಯನಿರ್ವಹಿಸುತ್ತಿರುವವರನ್ನು ಎಲ್ಲಾ ವಿಭಾಗ ಮತ್ತು ಉಪ ವಿಭಾಗದವರು ಸಂಪರ್ಕಿಸಬೇಕಾಗಿರುದರಿಂದ ಅಭಿಯಂತರರ ಶಾಖೆಯ ಮುಖ್ಯ ಕಛೇರಿಗೆ ಹಾಗೂ ಹೊಸದಾಗಿ ಸೃಜಿಸಲಾಗಿರುವ ಏಳು ಉಪ ವಿಭಾಗಗಳಿಗೆ ಅಗತ್ಯವಿರುವ ಒಟ್ಟು 41 ಸಿಮ್ ಕಾರ್ಡ್‌ಗಳನ್ನು ಒದಗಿಸುವಂತೆ ಅಧೀಕ್ಷಕ ಅಭಿಯಂತರರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು, ಇವರಿಂದ ಸಿಯುಜಿ, ನೆಟ್‌ವರ್ಕ್ ಯೋಜನೆಯಡಿಯಲ್ಲಿ ಅಭಿಯಂತರ ಮುಖ್ಯ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿಗಳ ಮತ್ತು ಇತರೆ ಅಧಿಕಾರಿಗಳ ಬಳಕೆಗೆ ಒದಗಿಸಲಾಗುವ ಸಿಮ್ ಕಾರ್ಡ್ ಮತ್ತು ಮಾಸಿಕೆ ವೆಚ್ಚದ ವಿವರಗಳು ಈ ಕೆಳಕಂಡಂತಿವೆ.

**ಅನುಬಂಧ**

| ಕ್ರ. ಸಂ | ಪದನಾಮ | ಸಂಖ್ಯೆ | ಸಿ.ಯು.ಜಿ ಯೋಜನೆ | ಮಾಸಿಕ ವೆಚ್ಚ | ಒಟ್ಟು ವೆಚ್ಚ |
|---|---|---|---|---|---|
| 1 | ಉಪ ಮುಖ್ಯ ಇಂಜಿನಿಯರ್ | 1 | 525/– | 350–00 | 875–00 |
| 2 | ತಾಂತ್ರಿಕ ಸಹಾಯಕರು | 1 | 525/– | 350–00 | 875–00 |
| 3 | ಸಹಾಯಕ ಇಂಜಿನಿಯರ್ | 16 | 525/– | 350–00 | 14,000–00 |
| 4 | ಕಿರಿಯ ಇಂಜಿನಿಯರ್ | 14 | 525/– | 350–00 | 12,250–00 |
| 5 | ಸಾಂಖ್ಯಿಕ ಅಧಿಕಾರಿ | 1 | 525/– | 350–00 | 875–00 |
| 6 | ಡಬ್ಲ್ಯೂಬಿಪಿಎಮ್ಎಸ್ | 1 | 525/– | 350–00 | 875–00 |
| 7 | ಸಹಾಯಕ ಕಾರ್ಯಪಾಲಕ ಅಭಿಯಂತರರು | 7 | 525/– | 350–00 | 6125–00 |
| | ಒಟ್ಟು | 41 | | | 35,875–00 |

ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಹೆಚ್ಎಫ್ಡಬ್ಲ್ಯೂ/ ಕೆಹೆಚ್ಎಸ್‌ಡಿಆರ್‌ಪಿ/ಸೆಕ್ಟ್/ 59/2007,ಬೆಂಗಳೂರು ದಿನಾಂಕ 28ನೇ ಜನವರಿ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಮೇಲೆ ಅನುಬಂಧದಲ್ಲಿ ನಮೂದಿಸಿರುವ ಅಧಿಕಾರಿಗಳಿಗೆ ಭಾರತ ಸಂಚಾರ ನಿಗಮ ನಿಯಮಿತದ, ಸಿಯುಜಿ ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸಿಮ್ ಕಾರ್ಡ್ ಒಂದಕ್ಕೆ 525/– ರಂತೆ ಒಪ್ಪಿ 41 (ನಲವತ್ತೊಂದು) ಮೊಬೈಲ್ ಸಿಮ್‌ಕಾರ್ಡ್ ಒದಗಿಸುವುದಕ್ಕೆ ಮತ್ತು ಸದರಿ ಮೊಬೈಲ್ ದೂರವಾಣಿಗಳ ವೆಚ್ಚವನ್ನು ಮಾಹೆಯಾನ ಒಂದಕ್ಕೆ ವೆಚ್ಚ ರೂ. 350/– ಗಳವರೆಗೆ ನಿಗದಿಪಡಿಸಿದೆ. ಒಂದು ವೇಳೆ ಅನುಮತಿ ನೀಡಿರುವ ಮೊತ್ತಕ್ಕಿಂತ ಹೆಚ್ಚಿನ ಮೊತ್ತ ಪಾವತಿಸಬೇಕಾದಲ್ಲಿ ಆಯಾ ಅಧಿಕಾರಿಗಳ ಸ್ವತ: ಹೆಚ್ಚುವರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ "0210–04–800–0–02 (Miscellaneous Receipt) ಅಡಿಯಲ್ಲಿ ತಮ್ಮ ಸ್ವಂತ ಹಣದಿಂದ ಪಾವತಿಸುವುದು ಎಂಬ ಷರತ್ತಿನ ಮೇರೆಗೆ ಒಟ್ಟು ವೆಚ್ಚ ರೂ. 35,875–00 (ರೂಪಾಯಿ ಮೂವತ್ತೈದು ಸಾವಿರದ ಎಂಟುನೂರ ಎಪ್ಪತ್ತೈದು ಮಾತ್ರ) ಗಳಿಗೆ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ದೂರವಾಣಿ ಲೆಕ್ಕ ಶೀರ್ಷಿಕೆ " 2210–06–800–0–84 (ಯೋ) 052" ಯಡಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಶಶಿಧರ್)**
ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿಆರ್–321

**HEALTH AND FAMILY WELFARE SECRETARIAT**

**CORRIGENDUM**

**No HFW (PR) 4 WBA 2010, Bangalore, Dated : 29-01-2010**

In the Government Order No. HFW (PR) 4 WBA 2010 Bangalore dated 23-01-2010 in the page No.2 Para No. 1 instead of "1 year '' it shall be read as " 2 years."

By Order and in the name of the Governor of Karnataka

(**M. Shashidhar)**
Deputy Secretary to Government
KHSDRP
Health and Family Welfare Department

P.R 322

**HEALTH AND FAMILY WELFARE SECRETARIAT**

**Sub :-** Consultancy Services for " Preparation of Medium Term Expenditure Framework (MTEF) and Public Expenditure Review (PER) of the activities of the Health & Family Welfare Dept. of the Govt. of Karnataka for the period of five years from 2010-11 reg.

**Read :-** Proceedings of the 19th meeting of Programme Steering Committee dated 04-01-2010

**Preamble:**

Karnataka Health System Development and Reform Project (KHSDRP) is being implemented from 11-1-2007 by the Govt. of Karnataka (GoK) with the World Bank assistance at a cost of US $ 206.48 million (Rs. 898 crores) with the main objective of increasing utilization of essential health services (curative, preventive and public health), particularly in the underserved areas and among vulnerable groups, to accelerate achievement of the health related Millennium Development Goals (MDGs) Under the Programme Finance window of the project, Bank assistance of US $ 55 million is provided over a period of 5 years from 2006-07 by way of incentive funding linked to real growth in the spending on Primary Health Care by the GoK.

Programme Financing aims to contribute to realistic budgetary growth in the H& FW expenditure in accordance with the projections in the Medium Term Fiscal Plan (MTFP) to ensure that the process of planning, execution and monitoring of Public and Primary Health Care activities are strengthened. As a strategic plan to manage the resources for improving the Healthcare infrastructure to derive optimal benefits of the multiple investments in the health care sector and a step in the implementation of the Programme Finance Support, preparation of a Medium Term Expenditure Framework (MTEF) is proposed. MTEF is to be used as a tool for the medium term planning of the activities to be carried out by the Department of Health & Family Welfare (DoH& FW), over a period of five years. This is also one of the agreed action points in the last Implementation Support Mission held in October 2009.

Services of a Consultancy firm is to be hired for the preparation of the MTEF. After obtaining approval of the World Bank for the Terms of Reference (ToR) for assigning the consultancy work for preparation of the MTEF, Project has gone through process of shortlisting eligible Consultancy firms by inviting Expression of interest (EOI) in leading newspaper, issue of Request for Proposal (RFP) to the shortlisted firms for submission of technical and financial bids, evaluation & qualification of the technical bids and opening financial bids of the technically qualified firms, 75 points were fixed as the cut off point for Technical qualification. Quality and Cost Based Selection (QCBS) method of selection has been followed in selecting the Consultancy firm with 80% weightage for technical score and 20 % weightage for the financial score. 13 firms responded to the notification seeking EOI of which 6 were shortlisted for issue of RFP and 3 firms responded to the RFP, all of whom technically qualified. On the basis of the combined score obtained under the QCBS selection method, ICRA Management Consulting Services Limited (IMaCS) NOIDA have emerged as L-1 and they have bid Rs. 20.56 lakhs+ service tax extra, as applicable, for the assignment. IMaCS have handled the assignment of Preparation of MTEF for Uttarakhand State Health Development Project in 2008 for World Bank and feedback received from the Bank for the quality and adherence to deliverables under the Project by IMaCS is satisfactory.

Proposal to award the Consultancy Services for "Preparation of Medium Term expenditure Framework (MTEF) and Public Expenditure Review (PER) of the activities of the Health & Family Welfare

Dept. of the Govt. Karnataka for the period of five years from 2010-11" to IMaCS, NOIDA is considered and approved by the Programme steering Committee at the meeting held on 4-1-2010.

Hence the following Order.

**Government Order No. HFW (PR) 6 WBA 2009 Bangalore, dated : 29-01-2010**

In the circumstances explained above, approval is accorded to award Consultancy Services for Preparation of Medium Term Expenditure Framework (MTEF) and Public Expenditure Review (PER) of the activities of the Health & Family Welfare Dept. of the Govt. of Karnataka for the period of five years from 2010-11" to ICRA management Consulting Service Limited (IMaCS), NOIDA at Rs. 20.56 lakhs (fee for PER & MTEF is Rs. 8.43 lakhs & Reimbursable Expenses is Rs. 4.60 Lakhs and Fee for Rolling MTEF is Rs. 5.08 lakhs & Reimbursable Expenses is Rs. 2.45 lakhs), including traveling and other expenses, service tax being extra, as applicable. Scope of the work under the Consultancy Services shall comprise of :

**(i)** Preparation of MTEF for the period 2010-15;

(ii) Training the staff of the Health & Family Welfare Department and other relevant Departments, to facilities them, both in the use of the MTEF and in preparation of the rolling MTEF year on year;

(iii) Help/Handhold the Project/GoK in the preparation of the Rolling MTEF for the next 2 years i.e., 2010 for 2011-2016 & 2011 for 2012-2017 after the MTEF for the period 2010-15 is prepared.

Deliverables under the Consultancy assignment, time limit for submission of the reports and terms and payment are :

| Report | Brief Contents | Time limit | Payment |
|---|---|---|---|
| Report 1 | Brief resume of all the materials that are examined and proposed to be used for various steps of the assignment. | Within 3 weeks of signing the contract agreement | 10% of the agreed fee for PER & MTEF |
| Report 2 | Updation of the PER (Step 1 of the assignment as detailed in the ToR). This will also include a template in excel spreadsheet linking budget codes to alternative classifications. | Within 6 weeks of signing of the contract agreement | |
| Report 3 | MTEF report covering Steps 2 to 6 of the assignments as detailed in the ToR will be delivered within the following schedules: | | |
| Report 3.1 | Inception report indicating approach to the MTEF (steps 2 to 6) with the framework of the chapters and the source materials analyzed. At this stage, clarity must be demonstrated in the way objectives, programmes, activities, outputs and outcomes are being linked along with expenditure outlays. Clarity must also be demonstrated about the way resource envelopes are being enlisted and analysed. | Within 6 weeks of signing of the contract agreement | 10% of the agreed fee for PER & MTEF |
| Report 3.2 Draft Report | This will inter alia also include the tables and spreadsheets linking objectives, programmes and activities and expenditure levels to outputs and outcomes in a | Within 12 weeks of signing of the contract agreement | 20% of the agreed fee for PER & MTEF |

| | | | |
|---|---|---|---|
| | multiyear frame work. Draft report must be as near complete as possible.] | | |
| Report 3.3 Draft Final Report | State Government/KHSDRP will give comments on the draft report within 2 weeks of receipt of the report. | Within 3 weeks of the receipt of comments from the Govt./KHSDRP | 20% of the agreed fee for PER & MTEF |
| Final Report | State Government/KHSDRP will give comments on the draft final report within 2 weeks of receipt of the report. | Within 3 weeks of the receipt of final comments from the Govt./KHSDRP | 20% of the agreed fee for PER & MTEF |
| Balance 20% of the fee for PER & MTEF would be released to the extent of 10% each after preparation of Rolling MTEF for the years 2011-2016 and 2012-17 along with the remuneration quoted for preparation of the respective Rolling MTEF. | | | |

A Review Committee consisting of the following shall review the progress of the work and the reports submitted by the Consultancy firm from time to time, give its suggestions/views for modification/improvement and approve the draft reports submitted by the Consultant firm :

1. The Commissioner of Health and Family Welfare, Chairman
2. The Project Administrator, KHSDRP and Mission Director, NRHM, Member
3. The Director of Health and Family Welfare, Member
4. The Deputy Secretary (Budget & Resources), Finance Department, Member
5. The Joint/Deputy Director (H & FW Schemes), Dept. of Planning, Statistics & Institutional Finance, Member
6. The JD (Planning), Health and Family Welfare Department, Member
7. The Chief Administrative Officer, KHSDRP, Member
8. The Chief Accounts Officer, Health and Family Welfare Department, Member
9. The CFO, KHSDRP and NRHM, Member Secretary

The Official Memorandum Constituting the above Committee will be issued separately.

Expenditure towards this consultancy contract is debitable to the Head of Account “2210-06-800-0-84 KHSDRP Project Management & Evaluation – EAP – 051 “.

ICRA Management Consulting Services Limited (IMaCS), NOIDA shall enter into a contract with the project detailing therein the team to be deployed, services and reports to be provided by them under the Contract and other terms & conditions governing the Consultancy assignment.

By Order and in the name of the Governor of Karnataka

(**M.Shashidhar)**
Deputy Secretary to Government
KHSDRP
Health and Family Welfare Department

P.R. 323

**HEALTH AND FAMILY WELFARE SECRETARIAT**

**Sub :-** Training of Master Resource Persons for the VHSC under Capacity Building of VHSCs-Reg.

**Read :-** Proceedings of the 19th meeting of Programme Steering Committee dated 04-01-2010.

**Preamble:**

The Karnataka Health System Development and Reform Project has planned to undertake the capacity building of Village Health Sanitation Committee/Arogya Raksha Samithi (VHSC/ARS) in the State. In this context, it is decided to conduct training of Master Resource Persons who will in turn train the VHSCs/ARSs. The Master Resource Persons are selected from the shortlisted organizations and District Programme Officers. It is proposed to conduct the training programme in 4 batches of 40

members each, totaling 160 Master Resource Persons in the State to carry out the capacity building of VHSCs/ARSs. In this regard, M/s Bharath Gyan Vigyan Samithi has been shortlisted to provide and facilitate this training on a single source basis. The approval has been accorded in the 19th meeting of the Programme Steering Committee held on 4th January 2010. The estimated costs for the training programme are as below :

**Estimated Cost per batch**

**Duration : 5 days** **No. of Trainees : 40 Members**

| *Sl. No.* | *Particulars* | *Amount in Rupees* |
|---|---|---|
| 1 | Food & Accomodation (40x600x5) | Rs. 1,20,000.00 |
| 2 | Facilitator Honorarium @ Rs. 600 per session x 20 sessions | Rs. 12,000.00 |
| 3 | Travelling allowance actual for Facilitators | Rs. 10,000.00 |
| 4 | Travelling allowance for trainees (40x600) | Rs. 24,000.00 |
| 5 | Daily allowance for trainees (40x500x5) | Rs. 1,00,000.00 |
| 6 | Folder, Pen & Pad @ Rs. 200x40 | Rs. 8,000.00 |
| 7 | Stationery | Rs.6,000.00 |
| 8 | Transportation (actual) | Rs. 15,000.00 |
| 9 | Registration, Banner, Photo | Rs. 3,000.00 |
| 10 | Conference Hall Rent (2000x5) | Rs. 10,000.00 |
| 11 | CD Projector | Rs. 5,000.00 |
| | **Total** | **Rs. 3,13,000.00** |

**Budget for workshop and inauguration programme**

| *Sl. No.* | *Particulars* | *Amount in Rupees* |
|---|---|---|
| 1 | Food @ Rs. 200x100 persons | Rs. 20,000.00 |
| 2 | Travelling allowance @ Rs. 600x30 – NGO Representatives (actual) | Rs. 18,000.00 |
| 3 | Registration, Banner & Photo | Rs. 5,000.00 |
| 4 | Other Expenses | Rs. 2,000.00 |
| | **Total** | Rs. 45,000.00 |

Total Cost for the Training Programme for Training of Master Resource persons :

| *Sl. No.* | *Particulars* | *Amount in Rupees* |
|---|---|---|
| 1 | Inauguration Programme | Rs. 45,000.00 |
| 2 | Four batches trainings @ Rs. 3,13,000 x4 | Rs. 12,52,000.00 |
| 3 | Programme Monitoring Fees to M/s BGVS, Bangalore | Rs. 50,000.00 |
| 4 | Printing and Photo Copying charges for Training Manuals | Rs. 50,000.00 |
| | **Total** | Rs. 13,97,000.00 |

**(Rupees Thirteen Lakhs Ninety Seven Thousand Only)**

Thus the total estimated cost for the training programme for training of the Master Resource Persons of is likely to be approximately Rs. 13.97 lakhs.

Hence the following Order.

**Government Order No. HFW (PR) 06 WBA 2010, Bangalore, dated 30-01-2010.**

Under the circumstances mentioned in the preamble, Government are pleased to accord approval to undertake the training of Master Resource Persons under Capacity Building of VHSCs/ARSs.

Approval is also accorded for the estimated budget of Rs. 13,97,000/- (Rupees thirteen lakhs ninety seven thousand only) as detailed in the preamble.

The expenditure shall be incurred under the Head of Account "2210-06-800-0-82 (Plan) " under PHCF component for the corresponding financial year.

By Order and in the name of the Governor of Karnataka
(**M.Shashidhar)**
Deputy Secretary to Government
KHSDRP
Health and Family Welfare Department

P.R. 324

**ವಸತಿ ಸಚಿವಾಲಯ**

**ವಿಷಯ :** ಚಿತ್ರದುರ್ಗ ಜಿಲ್ಲೆ, ಹೂಳಲ್ಕರೆ ತಾಲ್ಲೂಕು ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ.1999, ದಿನಾಂಕ : 10–05–2000
**2)** ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್.2008, ದಿನಾಂಕ : 16–09–2009

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ ಚಿತ್ರದುರ್ಗ ಜಿಲ್ಲೆ, ಹೂಳಲ್ಕರೆ ತಾಲ್ಲೂಕು ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 02 ಹೆಚ್ಎಎಸ್ 2010, ಬೆಂಗಳೂರು, ದಿನಾಂಕ 19ನೇ ಜನವರಿ, 2010.**

ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕು ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಬಸವರಾಜ್ ಬಿನ್ ಹಾಲಪ್ಪ, ಹೊಳಲ್ಕೆರೆ | ಸಾಮಾನ್ಯ |
| 2. | ಶ್ರೀ ವೆಂಕಟೇಶ್ ಬಿನ್ ಸಣ್ಣ ಹನುಮಪ್ಪ, ಹೊಳಲ್ಕೆರೆ | ಪರಿಶಿಷ್ಟ ಜಾತಿ |
| 3. | ಶ್ರೀ ನಜೀರ್ ಸಾಬ್ ಬಿನ್ ಸೈಯದ್ ಬಷೀರ್ ಸಾಬ್, ಹೊಳಲ್ಕೆರೆ | ಅಲ್ಪಸಂಖ್ಯಾತರು |
| 4. | ಶ್ರೀಮತಿ ಸುಧಾ ಕೋಂ ಹೆಚ್. ಸಿ. ಬಸವರಾಜ್, ಹೊಳಲ್ಕೆರೆ | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಆರ್. ವಲ್ಲೂರ)**
ಪೀಠಾಧಿಕಾರಿ–2 ವಸತಿ ಇಲಾಖೆ

ಪಿಆರ್–325

## ಶಿಕ್ಷಣ ಸಚಿವಾಲಯ

ವಿಷಯ : 2009–10ನೇ ಸಾಲಿಗೆ ರಾಜ್ಯ ವಲಯ ಯೋಜನೆಯ ಮುಂದುವರಿಕೆ ಕಾರ್ಯಕ್ರಮದಡಿ ಉಪ ನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಹಾಗೂ ದುರಸ್ತಿಗಾಗಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಇಡಿ 76 ಯೋಯೋಕ 2009, ದಿನಾಂಕ 24–04–2009
2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ : ಯೋ (7) ಉ.ನಿ.ಕ್ಷೇ.ಶಿ.ಕ.ದು.ಅನು3/2009–10, ದಿನಾಂಕ 16–12–2009

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿಗೆ ಮುಂದುವರಿಕೆ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ, ಉಪ ನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಹಾಗೂ ದುರಸ್ತಿಗಾಗಿ 300.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–01–104–0–00–059 (ಯೋಜನೆ) ಪರಿವೀಕ್ಷಣೆ ಅಡಿ ಒದಗಿಸಲಾಗಿರುವ ಅನುದಾನ 60.00 ಲಕ್ಷ ರೂಪಾಯಿಗಳಲ್ಲಿ ಇದುವರೆವಿಗೂ ಕೇವಲ 10.00 ಲಕ್ಷ ರೂಪಾಯಿಗಳು ಮಾತ್ರ ವೆಚ್ಚವಾಗಿದ್ದು, ಸದರಿ ಮೊತ್ತದಿಂದ ರಾಮನಗರ ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ ದುರಸ್ತಿಗಾಗಿ 15.00 ಲಕ್ಷ ರೂಪಾಯಿ ಮತ್ತು ಮೈಸೂರು ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಕಛೇರಿ ದುರಸ್ತಿಗಾಗಿ 15.00 ಲಕ್ಷ ರೂಪಾಯಿಗಳು ಹೀಗೆ ಒಟ್ಟು 30.00 ಲಕ್ಷ ರೂಪಾಯಿಗಳನ್ನು ಲೆಕ್ಕ ಶೀರ್ಷಿಕೆ 2202–02–800–1–10–059 ಗೆ ಮರು ಹಂಚಿಕೆ ಮಾಡಿ ಆದೇಶ ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

3. ಸದರಿ ಅನುದಾನ ಹಂಚಿಕೆ ಮಾಡಿ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 100 ಯೋಸಕ 2009, ಬೆಂಗಳೂರು, ದಿನಾಂಕ 29–01–2010**
**(ಇಡಿ 13 ಸ್ಕೀಮರ (ಯುನಿಕ್) 2009, ದಿನಾಂಕ 29–01–2010)**

4. 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–01–104–0–00–059 (ಯೋಜನೆ) ಪರಿವೀಕ್ಷಣೆ ಅಡಿ ಒದಗಿಸಲಾಗಿರುವ ಅನುದಾನದಲ್ಲಿ ಉಳಿತಾಯವಾಗುವ ಮೊತ್ತದಿಂದ ರಾಮನಗರ ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ ದುರಸ್ತಿಗಾಗಿ 15.00 ಲಕ್ಷ ರೂಪಾಯಿಗಳು (ಹದಿನೈದು ಲಕ್ಷ ರೂಪಾಯಿಗಳು ಮಾತ್ರ) ಮತ್ತು ಮೈಸೂರು ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಕಛೇರಿ ದುರಸ್ತಿಗಾಗಿ 15.00 ಲಕ್ಷ ರೂಪಾಯಿಗಳು (ಹದಿನೈದು ಲಕ್ಷ ರೂಪಾಯಿಗಳು ಮಾತ್ರ) ಹೀಗೆ ಒಟ್ಟು 30.00 ಲಕ್ಷ ರೂಪಾಯಿಗಳನ್ನು (ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ 2202–02–800–1–10–059 (ಯೋಜನೆ)ಗೆ ಮರು ಹಂಚಿಕೆ ಮಾಡಲಾಗಿದೆ. ಈ ಮೊತ್ತವನ್ನು ವೆಚ್ಚ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

5. ಮರುಹೊಂದಾಣಿಕೆ ಪ್ರಪತ್ರ 22–ಎ ಅನ್ನು ಖಜಾನಾ ಇಲಾಖೆಯ ಎನ್.ಎಂ.ಸಿ. ಸೆಂಟರ್‌ಗೆ ಸಲ್ಲಿಸಿ ಮೊತ್ತವನ್ನು ಗಣಕದಲ್ಲಿ ಅಪ್ ಲೋಡ್ ಮಾಡಿಸಲು ಕ್ರಮ ವಹಿಸತಕ್ಕದ್ದು.

6. ಆ ಮೊತ್ತದಲ್ಲಿ ಕಾಮಗಾರಿಗಳನ್ನು ಶೀಘ್ರವಾಗಿ ಕೈಗೆತ್ತಿಕೊಳ್ಳಲು ಸೂಚಿಸಿದೆ

7. ಪ್ರತಿ ಮಾಹೆಯೂ ಎಂಎಂಆರ್ ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

8. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

9. ಖರೀದಿಗಳಿಗೆ ಸಂಬಂಧಿಸಿದಂತೆ, ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಪಾಲಿಸತಕ್ಕದ್ದು.

10. ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಚಿತರಿಕ ಆರ್ಥಿಕ ಸಲಹೆಗಾರರು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ : ಶಿಇ/43/ಐ.ಎಫ್ (ಬಿ ಮತ್ತು ಎ) 2010, ದಿನಾಂಕ 08–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಐ. ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

ಪಿಆರ್ 334

## ಶಿಕ್ಷಣ ಸಚಿವಾಲಯ

**ವಿಷಯ :** ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ನಾನ್ ಇಂಜಿನಿಯರಿಂಗ್ ವಿಭಾಗದ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ತುಂಬಲು ವೃಂದ ಮತ್ತು ನೇಮಕಾತಿ ನಿಯಮಾವಳಿಗಳನ್ನು ಮಾರ್ಪಡಿಸಿ ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 165 ಡಿಟಿಇ 2007, ದಿನಾಂಕ : 6–9–2008
2) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ : ಟಿಟಿಇ/90/ಇಎಸ್‌ಟಿ (4) ಎ 06/1881, ದಿನಾಂಕ 10/11–09–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 06–09–2008ರ ಅಧಿಸೂಚನೆಯಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸಹಾಯಕ ಪ್ರಾಧ್ಯಾಪಕರುಗಳ ಇಂಜಿನಿಯರಿಂಗ್ ವಿಷಯಗಳ ಹುದ್ದೆಗಳನ್ನು ಭರ್ತಿ ಮಾಡಲು ಎ.ಐ.ಸಿ.ಟಿ.ಇ. ನಿಗದಿಪಡಿಸಿರುವ ವಿದ್ಯಾರ್ಹತೆಯನ್ವಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಈ ಕೆಳಕಂಡಂತೆ ಅವಕಾಶವನ್ನು ಕಲ್ಪಿಸಲಾಗಿದೆ.

| | | |
|---|---|---|
| Assistant Professor Engineering College (Engineering Subjects) (Rs. 12000-18300) (AICTE) | By direct recruit-ment | **For direct recruitment :-** (1) Must posses Ph.D. degree with the first class in Bachelor's degree or Master's degree level in the appropriate branch of Engineering / Technology with three years experience in Teaching in an institution recognized by AICTE or an University established by law or in an Industry or Research the level of lecturer; or (2) First Class Master's degree in the appropriate branch of Engineering/Technology with five years experience in Teaching/ Industry at the level of lecturer or equivalent. Such candidates shall be required to obtain Ph.D. degree within a period of seven years from the date of appointment as Assistant Professor :<br>Provided that in respect of candidates from Industry/profession with First Class Bachelor's degree/First class Master's degree in the appropriate branch of Engineering/Technology must have not less than five years Industrial/Professional experience.<br>Age : Must not have attained the age of forty five years |

ಆದರೆ ಸದರಿ ನಿಯಮಗಳಲ್ಲಿ ಸಹಾಯಕ ಪ್ರಾಧ್ಯಾಪಕರು ನಾನ್–ಇಂಜಿನಿಯರಿಂಗ್ ವಿಷಯಗಳ ಹುದ್ದೆಗಳನ್ನು ಭರ್ತಿ ಮಾಡಲು ಅವಕಾಶವನ್ನು ಕಲ್ಪಿಸಿರುವುದಿಲ್ಲ. 1987 ರಲ್ಲಿನ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಬಿ.ಡಿ.ಟಿ. ಇಂಜಿನಿಯರಿಂಗ್ ಕಾಲೇಜಿನ ನಾನ್ ಇಂಜಿಯಿಯರಿಂಗ್ ವಿಭಾಗದ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳ ನೇಮಕಾತಿಗೆ ಈ ಕೆಳಗಿನಂತೆ ಅವಕಾಶವನ್ನು ಕಲ್ಪಿಸಲಾಗಿತ್ತು.

| | | |
|---|---|---|
| Assistant Professor, B.D.T. College of Engineering, Davanagere (Non-Engineering subjects) | **By promotion** : From the cadre of Lecturer in the respective branch of Non-Engineering subjects. If no suitable person available for promotion by Direct Recruitment.<br>Or<br>By deputation of an official of the equivalent grade from any of the State Universities or State or Central Civil Services | **For promotion :-** (1) Must posses have put in not less than three years of service in the cadre specified in column (2)<br>**For Direct Recruitment :-** Must be holder of a Second class Master's Degree in the appropriate subjects.<br>Must have put in not less than five years of experience in teaching or research in any of the recognised institution.<br>Age : Must not have attained forty years |

1987 ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸಹಾಯಕ ಪ್ರಾಧ್ಯಾಪಕರು, ನಾನ್ ಇಂಜಿನಿಯರಿಂಗ್ ಹುದ್ದೆಗಳ ನೇರ ನೇಮಕಾತಿಗೆ "Must be holder of a second class Master Degree in the appropriate subjects" ವಿದ್ಯಾರ್ಹತೆಯನ್ನು ನಿಗದಿಪಡಿಸಲಾಗಿತ್ತು. ಆದರೆ ಎಐಸಿಟಿಇ ಯು ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ನೇರನೇಮಕಾತಿಯಿಂದ ಭರ್ತಿ ಮಾಡಲು ಮತ್ತು ಪಿಹೆಚ್.ಡಿ ವಿದ್ಯಾರ್ಹತೆಯನ್ನು ಪಡೆದಿರಬೇಕೆಂದು ನಿಗದಿಪಡಿಸಿರುತ್ತದೆ.

ಹಾಲಿ ಇರುವ ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಇಂಜಿನಿಯರಿಂಗ್ ವಿಭಾಗದಲ್ಲಿನ ಸಹಾಯಕ ಪ್ರಾಧ್ಯಾಪಕರುಗಳ ಹುದ್ದೆಯ ನೇಮಕಾತಿಗೆ ಅವಕಾಶವನ್ನು ಕಲ್ಪಿಸಿರುವುದರಿಂದ ನಾನ್–ಇಂಜಿನಿಯರಿಂಗ್ ವಿಭಾಗದಲ್ಲಿನ ಸಹಾಯಕ ಪ್ರಾಧ್ಯಾಪಕರುಗಳ ಹುದ್ದೆಯ ನೇರ ನೇಮಕಾತಿಗೆ ಅವಕಾಶವನ್ನು ಕಲ್ಪಿಸುವುದು ವಿದ್ಯಾರ್ಥಿಗಳ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಅವಶ್ಯಕತೆಯಿದೆಯೆಂದು ಸರ್ಕಾರವು ತೀರ್ಮಾನಿಸಿ, ಈ ರೀತಿ ನಾನ್ ಇಂಜಿನಿಯರಿಂಗ್ ವಿಭಾಗದ ವಿಷಯಗಳ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಪಿ.ಹೆಚ್.ಡಿ. ವಿದ್ಯಾರ್ಹತೆಯನ್ನು ನಿಗದಿಪಡಿಸಿ ನೇರನೇಮಕಾತಿಗೆ ವಯೋಮಿತಿಯನ್ನು 45 ವರ್ಷಗಳಿಗೆ ನಿಗದಿಪಡಿಸಿ ಸೂಕ್ತ ತಿದ್ದುಪಡಿ ತರಲು ನಿರ್ಧರಿಸಿದೆ.

ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ : ಇಡಿ 3 ಟಿಇಸಿ 2010 ಬೆಂಗಳೂರು, ದಿನಾಂಕ 30ನೇ ಜನವರಿ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಹೊರಡಿಸಿರುವ ಸರ್ಕಾರಿ ಅಧಿಸೂಚನೆ ಸಂಖ್ಯೆ ಇಡಿ 165 ಡಿಟಿಇ 2007, ದಿನಾಂಕ 06–09–2008ರ ನಿಯಮಾವಳಿಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ನಾನ್–ಇಂಜಿನಿಯರಿಂಗ್ ವಿಭಾಗದ ಸಹಾಯಕ ಪ್ರಾಧ್ಯಾಪಕರುಗಳ ಹುದ್ದೆಗಳ ನೇರ ನೇಮಕಾತಿಗೆ ಈ ಕೆಳಕಂಡಂತೆ ನೇಮಕಾತಿ ವಿಧಾನವನ್ನು ರೂಪಿಸಲಾಗಿದೆ.

| | | |
|---|---|---|
| Assistant Professor Engineering College (Non-Engineering Subjects) (Rs. 12000-18300) (AICTE) | By direct recruit-ment | **For direct recruitment :-** (1) Must posses Ph.D., degree with the first class in the Master's degree level in the appropriate subjects.<br>Must have put in five years experience in Teachng in an institution recognised by university established by law level of lecturer ;<br>**Age :** Must not have attained the age of forty five years |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಎಸ್. ನಾಗರಾಜ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಪಿಆರ್ 335

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಬಿ. ಪ್ರಭಾಕರ್, ಉಪ ಅರಣ್ಯ ಸಂರಕ್ಷಣಾಧಿಕಾರಿ (ನಿವೃತ್ತ) ಇವರ ರಜಾ ಅವಧಿ ಸಕ್ರಮಗೊಳಿಸುವ ಬಗ್ಗೆ :–

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಅಪಜೀ 75 ಅಪಸೇ 2007, ದಿನಾಂಕ 17–07–2009
2) ಮಹಾಲೇಖಪಾಲರ ಪತ್ರ ಸಂಖ್ಯೆ : GEX/D/PF/106/09-10/757, ದಿನಾಂಕ 10–08–2009

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 202 ಅಪಸೇ 2009, ಬೆಂಗಳೂರು, ದಿನಾಂಕ 30-01–2010**

ಸರ್ಕಾರದ ಆದೇಶ ಸಂಖ್ಯೆ : ಅಪಜೀ 75 ಅಪಸೇ 2007, ದಿನಾಂಕ 17–07–2009ರ ಆದೇಶವನ್ನು ಪರಿಷ್ಕರಿಸಿ ಶ್ರೀ ಬಿ. ಪ್ರಭಾಕರ್, ಉಪ ಅರಣ್ಯ ಸಂರಕ್ಷಣಾಧಿಕಾರಿ (ನಿವೃತ್ತ) ಇವರ ದಿನಾಂಕ 19–06–1989 ರಿಂದ 16–10–1995 ರವರೆಗಿನ ಸಕ್ರಮಗೊಳ್ಳದೆ ಇರುವ ಅವಧಿಯನ್ನು ವೈದ್ಯಕೀಯ ಕಾರಣಗಳ ಮೇಲೆ ಈ ಕೆಳಕಂಡಂತೆ ಸಂಯುಕ್ತ ರಜೆಯೆಂದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 198 ರನ್ವಯ ಪರಿಗಣಿಸಿ ಸಕ್ರಮಗೊಳಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| | | |
|---|---|---|
| 1 | ದಿನಾಂಕ 19-06-1989 ರಿಂದ 16-10-1989 ರವರೆಗೆ | ಕರ್ನಾಟಕ ನಾಗರೀಕ ನಿಯಮಾವಳಿಯ ನಿಯಮ 112 (9) (ಎ) ರನ್ವಯ 120 ದಿನಗಳ ಗಳಿಕೆ ರಜೆ |
| 2 | ದಿನಾಂಕ 17-10-1989 ರಿಂದ 30-12-1989 ರವರೆಗೆ | 75 ದಿನಗಳ ಅರ್ಧ ವೇತನ ರಜೆ |
| 3 | ದಿನಾಂಕ 31-12-1989 ರಿಂದ 31-05-1990 ರವರೆಗೆ | 152 ದಿನಗಳ ಅರ್ಧ ವೇತನ ರಜೆ |
| 4 | ದಿನಾಂಕ 03-11-1992 ರಿಂದ 01-02-1993 ರವರೆಗೆ | 90 ದಿನಗಳ ಅರ್ಧ ವೇತನ ರಜೆ |
| 5 | ದಿನಾಂಕ 06-04-1994 ರಿಂದ 25-10-1994 ರವರೆಗೆ | 203 ದಿನಗಳ ಅರ್ಧ ವೇತನ ರಜೆ |
| 6 | ದಿನಾಂಕ 26-10-1994 ರಿಂದ 16-10-1995 ರವರೆಗೆ | 356 ದಿನಗಳ ವೇತನ ರಹಿತ ರಜೆ |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಹಿಂಬರಹ ಸಂಖ್ಯೆ : ಅಪಜೀ 127 ಆಂಆಸ 09, ದಿನಾಂಕ 25-11-2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ವಡಗಾವ ಬಸವರಾಜ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, (ಸೇವೆಗಳು)

ಪಿಆರ್ 336

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಅಂಕದ ಮುರಿಗೇಶ ಹುಚ್ಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೆಬೆನ್ನೂರು ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಬಗ್ಗೆ :-

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ : ಒಇ 845 ಪಿಪಿಇ 2005, ದಿನಾಂಕ 03-01-2007
2) ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್.ಸಿಶಾ 1.122/2008-09, ದಿನಾಂಕ 02-09-2009

**ಪ್ರಸ್ತಾವನೆ :**

ಶ್ರೀ ಅಂಕದ ಮುರಿಗೇಶ ಹುಚ್ಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೆಬೆನ್ನೂರು, ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ 03-01-2007ರ ಅಧಿಸೂಚನೆಯ ಹೆಚ್ಚುವರಿ ಪಟ್ಟಿಯ ಕ್ರ.ಸಂ. 1ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ 10-01-2007ರ ಪೂರ್ವಾಹ್ನದಿಂದ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ 09-01-2009 ರಂದು ಪೂರೈಸಿರುತ್ತಾರೆ. ಸದರಿ ಅಧಿಕಾರಿಯವರು ಸದರಿ ಹುದ್ದೆಗೆ ನಿಗಧಿ ಪಡಿಸಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ-1 ಪತ್ರಿಕೆ-2ರಲ್ಲಿ ಉತ್ತೀರ್ಣರಾದ ಬಗ್ಗೆ ಪರೀಕ್ಷಾ ಫಲಿತಾಂಶವನ್ನು ದಿನಾಂಕ 6-11-2008ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ ಜನವರಿ 2007 ರಿಂದ ಏಪ್ರಿಲ್ 2007, 2007-08 ಮತ್ತು 2008-09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಅಂಕದ ಮುರಿಗೇಶ ಹುಚ್ಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೆಬೆನ್ನೂರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 10-01-2009 ರಿಂದ ತೃಪ್ತಿಕರವಾಗಿ ಪೂರೈಸುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 02-09-2009ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 396 ಪಿಪಿಇ 2009, ದಿನಾಂಕ 29ನೇ ಜನವರಿ, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)(ಎ)ರ ಅನುಸಾರ ಶ್ರೀ ಅಂಕದ ಮುರಿಗೇಶ ಹುಚ್ಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಣೆಬೆನ್ನೂರು ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 10–01–2009 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗ)

ಪಿಆರ್ 337

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಅನಿಲ್ ಕುಮಾರ್ ಆರ್.ತೊರವಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಧೋಳ್ ಅವರ ಪರಿವೀಕ್ಷಣಾ ಅವಧಿಯನ್ನು, ವಿಸ್ತರಿಸಿ ತೃಪ್ತಿಕರವೆಂದು ಘೋಷಿಸುವ ಬಗ್ಗೆ :–

**ಉಲ್ಲೇಖ :** 1) ಸರ್ಕಾರದ ಆದೇಶ ಸಂಖ್ಯೆ : ಒಇ 193 ಪಿಪಿಇ 2003, ದಿನಾಂಕ 06–05–2004

2) ಕರ್ತವ್ಯಕ್ಕೆ ಹಾಜರಾಗಲು ಕಾಲಮಿತಿ ವಿಸ್ತರಣೆಯ ಸರ್ಕಾರದ ಆದೇಶ ಸಂ.ಒ.ಇ. 375 ಪಿಪಿಇ 2006, ದಿನಾಂಕ 27–11–2006.

3) ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್.ಸಿಶಾ/1/122/2008–09, ದಿನಾಂಕ 05–09–2009.

**ಪ್ರಸ್ತಾವನೆ :**

ಶ್ರೀ ಅನಿಲ್ ಕುಮಾರ್ ಆರ್. ತೊರವಿ ಇವರು ಮೇಲೆ ಓದಲಾದ (1) ರ ಅಧಿಸೂಚನೆ ದಿನಾಂಕ 06–05–2004ರ ಕ್ರಮ ಸಂ. 23ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿರುತ್ತಾರೆ. ಮೇಲೆ ಓದಲಾದ (2)ರ ಅಧಿಸೂಚನೆ ದಿನಾಂಕ 27–11–2006ರಲ್ಲಿ ಅವರು ಕರ್ತವ್ಯಕ್ಕೆ ಹಾಜರಾಗಲು ಕಾಲಮಿತಿ ವಿಸ್ತರಣೆಯನ್ನು ದಿನಾಂಕ 30–11–2006ರವರೆಗೆ ವಿಸ್ತರಿಸಲಾಗಿದೆ. ಸದರಿ ಅಧಿಕಾರಿಯವರು ದಿನಾಂಕ 29–11–2006ರ ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿದ್ಧಾಪುರ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ 28–11–2008ರಂದು ಪೂರೈಸಬೇಕಾಗಿದ್ದು, ಈ ಇಲಾಖೆಗೆ ಸೇವೆಗೆ ಸೇರುವ ಪೂರ್ವದಲ್ಲಿ ಅಬಕಾರಿ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಸೇವೆ ಸಲ್ಲಿಸಿದ್ದು ಅಲ್ಲಿಯೇ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಉತ್ತೀರ್ಣರಾದ ಬಗ್ಗೆ ಪರೀಕ್ಷಾ ಫಲಿತಾಂಶವನ್ನು ದಿನಾಂಕ 28–04–2005ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07, 2007–08 ಮತ್ತು 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ 02 ದಿನಗಳ ಅಸಾಧಾರಣ ರಜೆಯನ್ನು ಪಡೆದಿರುತ್ತಾರೆ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಅನಿಲ್ ಕುಮಾರ್, ಆರ್. ತೊರವಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಧೋಳ್ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ 1(i)ರ ಪ್ರಕಾರ ದಿನಾಂಕ 29–11–2008 ರಿಂದ 30–11–2008ರವರೆಗೆ

ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ದಿನಾಂಕ 01-12-2008 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (3)ರ ಪತ್ರ ದಿನಾಂಕ 05-09-2009ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 401 ಪಿಪಿಇ 2009, ದಿನಾಂಕ 29ನೇ ಜನವರಿ, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ 1(i) ರ ಪ್ರಕಾರ ದಿನಾಂಕ 29-11-2008 ರಿಂದ 30-11-2008 ರವರೆಗೆ ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ಶ್ರೀ ಅನಿಲ್ ಕುಮಾರ್ ಆರ್. ತೊರವಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮುಧೋಳ್ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 01-12-2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗ)

ಪಿಆರ್ 338

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎ. ವಿ. ನಾಡಗೌಡ, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್ ಹಾಗೂ ಶ್ರೀ ಎಂ. ಪಿ. ಚವ್ಹಾಣ್, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ :-

**ಓದಲಾಗಿದೆ :**
1) ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರ ಸಂ. ಆರ್‌ಬಿ/ಇಎಸ್‌ಟಿ/3/ಸಿಆರ್/40/04-05, ದಿನಾಂಕ 16-05-2005.
2) ದಿನಾಂಕ 05-01-2006ರ ಕಾರಣ ಕೇಳುವ ನೋಟೀಸ್ ಸಂ. ಆರ್‌ಡಿ 42 ಎಡಿಇ 2006
3) ಆಪಾದಿತ ನೌಕರರು ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಸಮಜಾಯಿಷಿ ಹೇಳಿಕೆ :
   a) ಶ್ರೀ ಎಂ. ಪಿ. ಚವ್ಹಾಣ್, ದಿನಾಂಕ 30-01-2006
   b) ಎ. ವಿ. ನಾಡಗೌಡ, ದಿನಾಂಕ 15-03-2006
4) ಸರ್ಕಾರದ ಆದೇಶ ಸಂ. ಆರ್‌ಡಿ 42 ಎಡಿಇ 2005, ದಿನಾಂಕ 20-07-2006
5) ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಅವರ ಪತ್ರ ಸಂ. ಸಿಬ್ಬಂದಿ : 3 ಸಿಆರ್/40/2004-05, ದಿನಾಂಕ 12-05-2007.
6) ಸರ್ಕಾರದ ಪತ್ರ ಸಂ. ಆರ್‌ಡಿ 42 ಎಡಿಎ 2005, ದಿನಾಂಕ 11-05-2009

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ್ ತಾಲ್ಲೂಕಿನ ನ್ಯಾಯಾಲಯ ಪ್ರಕರಣ ಸಂ.: ಸಿ.ಹೆಚ್.ಎಸ್.ಆರ್. 44/03-04ರಲ್ಲಿ ದಿನಾಂಕ 09-03-2004ರಂದು ನ್ಯಾಯ ನಡವಳಿಕೆಯನ್ನು ಪ್ರಾರಂಭಿಸಿ 9 ಜನ ಪಕ್ಷಗಾರರಿಗೆ ನೋಟೀಸ್ ನೀಡುವಾಗ ಯಾವುದೇ ನಿಯಮಗಳನ್ನು ಪಾಲಿಸದೇ ಹಾಗೂ ಎಫ್.ಐ.ಆರ್. ಮೇಲೆ ದಿನಾಂಕ ಹಾಗೂ ಸಮಯ ನಮೂದಿಸದೇ ನಿಯಮದ ವಿರುದ್ಧವಾಗಿ ಪ್ರಕರಣವನ್ನು ಪ್ರಾರಂಭಿಸಿ, ಮುಂದುವರೆಸಿ ಕರ್ತವ್ಯ ಲೋಪ ಎಸಗಿರುವ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳ ಈ ಲೋಪದ ಬಗ್ಗೆ ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಅವರ ಕಾರ್ಯಾಲಯದ ಪ್ರಕರಣ ಸಂ. ಸಿ.ಆರ್.ಪಿ. 58/2004 ರಲ್ಲಿ ದಿನಾಂಕ 18-11-2004 ರಂದು ಹೊರಡಿಸಿದ ಆದೇಶದಲ್ಲಿ ಗಂಭೀರವಾಗಿ ಪರಿಗಣಿಸಿ, ಸದರಿ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ನಿರ್ಧರಿಸಿರುತ್ತಾರೆಂದು ಹಾಗೂ ಕೈಗೊಂಡ ಕ್ರಮದ ಬಗ್ಗೆ ನ್ಯಾಯಾಲಯಕ್ಕೆ ವರದಿ ಮಾಡಲು ಸೂಚಿಸಿದರೆಂದು ಈ ಕರ್ತವ್ಯ ಲೋಪ ಎಸಗಿದ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ದಿನಾಂಕ 16-05-2005ರ ಪತ್ರದಲ್ಲಿ ಬಿಜಾಪುರ ಜಿಲ್ಲಾಧಿಕಾರಿಗಳು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀ ಎಂ. ಪಿ. ಚವ್ಹಾಣ್, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್

ಶ್ರೀ ಎ. ವಿ. ನಾಡಗೌಡ, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್ ತಾಲ್ಲೂಕು

ಸದರಿ ಅಧಿಕಾರಿಗಳ ವಿರುದ್ಧ ದೋಷಾರೋಪಣ ಪಟ್ಟಿಗಳನ್ನು ಅನುಬಂಧ–1 ರಿಂದ 4 ರವರೆಗೆ ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ದಿನಾಂಕ 05–01–2006ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ, ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು, ಅದಕ್ಕೆ ಉತ್ತರವಾಗಿ ಮೇಲೆ ಕ್ರ.ಸಂ. (3)ರ ದಿನಾಂಕ 30–01–2006ರ ಮತ್ತು 15–03–2006ರಲ್ಲಿ ಕ್ರಮವಾಗಿ ಶ್ರೀ ಎಂ. ಪಿ. ಚವ್ಹಾಣ್, ಶ್ರೀ ಎ. ವಿ. ನಾಡಗೌಡ ಅವರುಗಳು ಲಿಖಿತ ಸಮಜಾಯಿಷಿ ಹೇಳಿಕೆಯನ್ನು ಸಲ್ಲಿಸಿ, ತಮ್ಮ ಆರೋಪಗಳನ್ನು ನಿರಾಕರಿಸಿದ್ದು, ಒಪ್ಪಿಕೊಂಡಿರುವುದಿಲ್ಲ ಹಾಗೂ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಆಪಾದಿತರು ಸಲ್ಲಿಸಿರುವ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ, ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ ಮತ್ತು ಅವರುಗಳು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಡಿಸಲಾದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ತೀರ್ಮಾನಿಸಿ ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ದಿನಾಂಕ 20–07–2006ರ ಆದೇಶದಲ್ಲಿ ಶ್ರೀ ಎಸ್. ಎನ್. ಧಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 1, ಸೆಕ್ಟರ್ 33, ಓಲ್ಡ್ ಡಿ.ಸಿ. ರೆಸಿಡೆನ್ಸಿ, ನವನಗರ, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಶ್ರೀ ಎಸ್. ಎನ್. ಧಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರು ಪ್ರಸ್ತುತ ಬಾಗಲಕೋಟೆ ಜಿಲ್ಲೆಯಲ್ಲಿ ಇರುವುದಿಲ್ಲವೆಂದು ತಿಳಿದು ಬಂದಿರುತ್ತದೆಂದು ಬೇರೊಬ್ಬ ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಮೇಲೆ ಓದಲಾದ ಕ್ರ. ಸಂ. (5)ರ ದಿನಾಂಕ 12–05–2007ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಎಸ್. ಎನ್. ಧಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರಿಗೆ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸುವಂತೆ ಮೇಲೆ ಓದಲಾದ ಕ್ರ.ಸಂ. (6)ರ ದಿನಾಂಕ 11–05–2009ರ ಪತ್ರದಲ್ಲಿ ಕೋರಲಾಗಿತ್ತು. ಸದರಿಯವರಿಗೆ ಕಳುಹಿಸಿದ ಪತ್ರವು No such addressee ಎಂದು ಅಂಚೆ ಮೂಲಕ ವಾಪಸ್ಸು ಆಗಿರುತ್ತದೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಪ್ರಕರಣದಲ್ಲಿ ನೇಮಿಸಿರುವ ವಿಚಾರಣಾಧಿಕಾರಿಯನ್ನು ಬದಲಿಸಿ, ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 42 ಎಡಿಇ 2005, ಬೆಂಗಳೂರು, ದಿನಾಂಕ 27–01–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂ. ಆರ್‌ಡಿ 42 ಎಡಿಇ 2005, ದಿನಾಂಕ 20–07–2006 ರಲ್ಲಿ ಶ್ರೀ ಎ. ವಿ. ನಾಡಗೌಡ, ಹಿಂದಿನ ತಹಶೀಲ್ದಾರ್ ಮತ್ತು ಶ್ರೀ ಎಂ. ಪಿ. ಚವ್ಹಾಣ್, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 13ರಡಿಯಲ್ಲಿ ಶ್ರೀ ಎಸ್. ಎನ್. ಧಾರವಾಡಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವುದನ್ನು ಮಾರ್ಪಡಿಸಿ, ಶ್ರೀ ಎನ್. ಎಸ್. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಸವ ನಿಲಯ, ಬರೀದ್ ಬವಡಿ ಹತ್ತಿರ, ಅಕ್ಕಮಹಾದೇವಿ ಬೈಲೈನ್, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ ಹಾಗೂ ತಹಶೀಲ್ದಾರ್, ಮುದ್ದೇಬಿಹಾಳ್ ತಾಲ್ಲೂಕು ಇವರನ್ನು ಪ್ರಕರಣದ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ. ಉಳಿದಂತೆ ದಿನಾಂಕ 20–7–2006ರ ಆದೇಶದಲ್ಲಿರುವ ಸೂಚನೆಗಳು ಅನ್ವಯವಾಗುತ್ತವೆ. ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11 ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿಆರ್ 339

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಿ. ಪ್ರಭಾಕರರೆಡ್ಡಿ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ :–

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ, ತುಮಕೂರು ಇವರ ಪತ್ರ ಸಂಖ್ಯೆ : ಸಿಬ್ಬಂದಿ (1) ವಿವ/69/09–10, ದಿನಾಂಕ 29–12–2009.

2) ಶ್ರೀಯುತರ ಮನವಿ ದಿನಾಂಕ 10–8–2009

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ 29–12–2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರು ಶ್ರೀ ಜಿ. ಪ್ರಭಾಕರರೆಡ್ಡಿ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಸ್ವಯಂ ನಿವೃತ್ತಿ ಕುರಿತಂತೆ ಅವರು ತಮ್ಮ ಸೇವಾ ಅವಧಿಯಲ್ಲಿ ಸೇವೆ ಸಲ್ಲಿಸಿದ ಎಲ್ಲಾ ಕಾರ್ಯಾಲಯಗಳಿಂದ ಬೇಬಾಕಿ ಪತ್ರಗಳನ್ನು ಪಡೆದು, ಅವುಗಳ ಪರಿಶೀಲನೆಯಿಂದ ಶ್ರೀಯುತರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಆಗಲೀ ಮತ್ತು ಹೂಡುವ ಸಂಭವ ಇಲ್ಲವೆಂದು ದೃಢಪಟ್ಟಿರುತ್ತದೆ ಎಂದು ಹಾಗೂ ಸದರಿಯವರಿಂದ ಸರ್ಕಾರಕ್ಕೆ ಸಂದಾಯವಾಗತಕ್ಕ ಯಾವುದೇ ಆರ್ಥಿಕ ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ಮೇಲೆ ಓದಲಾದ ಕ್ರಮ ಸಂಖ್ಯೆ : (2) ರಲ್ಲಿನ ಶ್ರೀ ಜಿ. ಪ್ರಭಾಕರರೆಡ್ಡಿ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಮನವಿಯಲ್ಲಿನ ಕೋರಿಕೆಯಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಬಹುದೆಂದು ವರದಿಯಲ್ಲಿ ತಿಳಿಸಿರುತ್ತಾರೆ. ಅದರಂತೆ ಸರ್ಕಾರವು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಜಿ. ಪ್ರಭಾಕರರೆಡ್ಡಿ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದು ಹಾಗೂ ಹೂಡಲು ಉದ್ದೇಶಿಸಿಲ್ಲವೆಂದು ಮತ್ತು ಶ್ರೀಯುತರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿಲ್ಲವೆಂದು ದೃಢೀಕರಿಸಿಕೊಂಡು ಶ್ರೀಯುತರಿಗೆ ದಿನಾಂಕ 30–01–2010 ರಂದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಎ) ಪ್ರಕಾರ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 549 ಎಎಸ್‌ಡಿ 2009, ಬೆಂಗಳೂರು, ದಿನಾಂಕ 28–01–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಪ್ರಭಾಕರರೆಡ್ಡಿ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಕೋರಿಕೆಯಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಎ) ಪ್ರಕಾರ ದಿನಾಂಕ 30–01–2010ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಎಸ್. ದೇಸಾಯಿ)**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು ಮತ್ತು ವಿ.ನಿ.)

ಪಿಆರ್ 340

## ಇಂಧನ ಸಚಿವಾಲಯ

**ವಿಷಯ :** ಮೆ : ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08 ಆರ್.ಆರ್.ಬಿ./2009/915, ದಿನಾಂಕ 18/21–2–2009.

2. ದಿನಾಂಕ 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ:: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್

ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 92 ಎನ್‌ಸಿಇ 2008, ಬೆಂಗಳೂರು, ದಿನಾಂಕ: 29–1–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity MW | Near by villages of the proposed area and district | Geographical area description of the project |
|---|---|---|---|
| 48I/13 | 5MW | Nuganhatti, Hulikere, Murgod,Subapur Belgaum District | Proposed area is a complex terrain located on the S-E of Murgod town. Further, it is described as fairly dense scrub with reserve forest status.<br>The area is held in the following Geographical co-ordinates :<br>Latitude : $15^0$53’34”-$15^0$56’21”N<br>Longitude : $74^0$56’7”-$75^0$0’0”E<br>Ridge peaks : 687.4,761 & 814m Amsl |

1. ಸದರಿ ಯೋಜನೆಯನ್ನು Financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗ ಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 354

**(ಎಸ್.ಜಿ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಅಕ್ಷಯ ಹೈಡ್ರೊ ಪವರ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್ಇಡಿ/06/ಜಡ್ಕಲ್/ಎಂಹೆಚ್ಎಸ್/09/1390, ದಿನಾಂಕ : 19/28–3–2009 ಮತ್ತು ಸಂಖ್ಯೆ : ಕೆಆರ್ಇಡಿ/06/ ಜಡ್ಕಲ್/2009/3079, ದಿನಾಂಕ : 16/19–9–2009.

**2.** ದಿನಾಂಕ : 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಅಕ್ಷಯ ಹೈಡ್ರೊ ಪವರ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಜಡ್ಕಲ್ ಗ್ರಾಮದ ಬಳಿ ಕನ್ನಿ ತೊರೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು ಮೆ: ಅಕ್ಷಯ ಹೈಡ್ರೊ ಪವರ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 295 ಎನ್‌ಸಿಇ 2009, ಬೆಂಗಳೂರು, ದಿನಾಂಕ: 29–01–2010.**

ಮೆ: ಅಕ್ಷಯ ಹೈಡ್ರೊ ಪವರ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಜಡ್ಕಲ್ ಗ್ರಾಮದ ಬಳಿ ಕನ್ನಿ ತೊರೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 13°47`01" Longitude : 75°50'50" Power House-Latitude: 13°23'27" Longitude : 74°50'00") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
   (ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
   (ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
   (ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.
4. ಫೈನಾನ್ಷಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

